# ಕನ್ನಡದಲ್ಲಿ ಭಾಷಾಂತರ ಕುರಿತ ಚಿಂತನೆಗಳು

## ಮುನ್ನುಡಿ ಬೆನ್ನುಡಿಗಳನ್ನು ಅನುಲಕ್ಷಿಸಿ

(ಕನ್ನಡ ವಿಶ್ವವಿದ್ಯಾಲಯ, ಹಂಪಿ ಭಾಷಾಂತರ ಅಧ್ಯಯನ ವಿಭಾಗಕ್ಕೆ
ಎಂ.ಫಿಲ್. ಪದವಿಗಾಗಿ ಸಲ್ಲಿಸುತ್ತಿರುವ ನಿಬಂಧ)


ಸಂಶೋಧಕ

**ಸತ್ಯಮೂರ್ತಿ ಹೆಚ್.**

ಮಾರ್ಗದರ್ಶಕರು

ಡಾ. ಎಂ. ಉಷಾ

ಪ್ರವಾಚಕರು

ಭಾಷಾಂತರ ಅಧ್ಯಯನ ವಿಭಾಗ





ಭಾಷಾಂತರ ಅಧ್ಯಯನ ವಿಭಾಗ

ಭಾಷಾ ನಿಕಾಯ

ಕನ್ನಡ ವಿಶ್ವವಿದ್ಯಾಲಯ, ಹಂಪಿ

ವಿದ್ಯಾರಣ್ಯ ೫೮೩.೨೭೬

ಜೂನ್ ೨೦೦೭

# ಕನ್ನಡದಲ್ಲಿ ಭಾಷಾಂತರ ಕುರಿತ ಚಿಂತನೆಗಳು

## ಮುನ್ನುಡಿ ಬೆನ್ನುಡಿಗಳನ್ನು ಅನುಲಕ್ಷಿಸಿ

(ಕನ್ನಡ ವಿಶ್ವವಿದ್ಯಾಲಯ, ಹಂಪಿ ಭಾಷಾಂತರ ಅಧ್ಯಯನ ವಿಭಾಗಕ್ಕೆ
ಎಂ.ಫಿಲ್. ಪದವಿಗಾಗಿ ಸಲ್ಲಿಸುತ್ತಿರುವ ನಿಬಂಧ)

ಸಂಶೋಧಕ

**ಸತ್ಯಮೂರ್ತಿ ಹೆಚ್.**

ಮಾರ್ಗದರ್ಶಕರು

**ಡಾ. ಎಂ.ಉಷಾ**

ಪ್ರವಾಚಕರು

ಭಾಷಾಂತರ ಅಧ್ಯಯನ ವಿಭಾಗ



ಭಾಷಾಂತರ ಅಧ್ಯಯನ ವಿಭಾಗ
ಭಾಷಾ ನಿಕಾಯ
ಕನ್ನಡ ವಿಶ್ವವಿದ್ಯಾಲಯ, ಹಂಪಿ
ವಿದ್ಯಾರಣ್ಯ ೫೮೩.೨೭೬

ಜೂನ್ ೨೦೦೭

## ಮಾರ್ಗದರ್ಶಕರ ಪ್ರಮಾಣಪತ್ರ

**ಕನ್ನಡದಲ್ಲಿ ಭಾಷಾಂತರ ಕುರಿತ ಚಿಂತನೆಗಳು** ಎಂಬ ನಿಬಂಧವನ್ನು ಕನ್ನಡ ವಿಶ್ವವಿದ್ಯಾಲಯದ ಎಂ.ಫಿಲ್.ಪದವಿಗಾಗಿ ಸತ್ಯಮೂರ್ತಿ ಹೆಚ್. ಅವರು ನನ್ನ ಮಾರ್ಗದರ್ಶನದಲ್ಲಿ ಸಿದ್ಧಪಡಿಸಿದ್ದಾರೆ. ಪ್ರಸ್ತುತ ನಿಬಂಧವು ಮೂಲವಾಗಿದ್ದು, ಈ ಮೊದಲು ಯಾವುದೇ ಪದವಿಗಾಗಿ ಸಲ್ಲಿಸಿರುವುದಿಲ್ಲವೆಂದು ದೃಢೀಕರಿಸುತ್ತೇನೆ.

ಡಾ. ಎಂ.ಉಷಾ
ಮಾರ್ಗದರ್ಶಕರು
ಭಾಷಾಂತರ ಅಧ್ಯಯನ ವಿಭಾಗ
ಕನ್ನಡ ವಿಶ್ವವಿದ್ಯಾಲಯ, ಹಂಪಿ

ಸ್ಥಳ : ವಿದ್ಯಾರಣ್ಯ

ದಿನಾಂಕ : 30.7.07

# ಪ್ರಮಾಣ ಪತ್ರ

**ಕನ್ನಡದಲ್ಲಿ ಭಾಷಾಂತರ ಕುರಿತ ಚಿಂತನೆಗಳು** ಎಂಬ ನಿಬಂಧವನ್ನು ಡಾ. ಎಂ.ಉಷಾ ಅವರ ಮಾರ್ಗದರ್ಶನದಲ್ಲಿ ಸಿದ್ಧಪಡಿಸಿ, ಎಂ.ಫಿಲ್.ಪದವಿಗಾಗಿ ಭಾಷಾ ನಿಕಾಯದ ಭಾಷಾಂತರ ಅಧ್ಯಯನ ವಿಭಾಗಕ್ಕೆ ಸಲ್ಲಿಸುತ್ತಿದ್ದೇನೆ. ಪ್ರಸ್ತುತ ನಿಬಂಧವು ಮೂಲವಾಗಿದ್ದು, ಈ ಮೊದಲು ಯಾವುದೇ ಪದವಿಗಾಗಿ ಸಲ್ಲಿಸಿರುವುದಿಲ್ಲವೆಂದು ಪ್ರಮಾಣೀಕರಿಸುತ್ತೇನೆ.

**ಸತ್ಯಮೂರ್ತಿ ಹೆಚ್.**
ಸಂಶೋಧಕ
ಭಾಷಾಂತರ ಅಧ್ಯಯನ ವಿಭಾಗ
ಕನ್ನಡ ವಿಶ್ವವಿದ್ಯಾಲಯ, ಹಂಪಿ

ಸ್ಥಳ : ವಿದ್ಯಾರಣ್ಯ

ದಿನಾಂಕ : 30-7-07

## ಕೃತಜ್ಞತೆಗಳು

ಕನ್ನಡ ವಿಶ್ವವಿದ್ಯಾಲಯದಲ್ಲಿ ಎಂ.ಫಿಲ್ ಮಾಡಲು ಅವಕಾಶ ಮಾಡಿಕೊಟ್ಟ ಹಿಂದಿನ ಕುಲಪತಿಗಳಾದ ಡಾ.ಬಿ.ಎ.ವಿವೇಕರೈ ಹಾಗೂ ಈಗಿನ ಕುಲಪತಿಗಳಾದ, ಪ್ರೊ.ಕೆ.ವಿ.ನಾರಾಯಣರವರಿಗೂ, ಕುಲಸಚಿವರಾದ ವಿ.ಶಂಕರ್ ಅವರಿಗೆ ಆಗಿನ ಅಧ್ಯಯನಾಂಗದ ನಿರ್ದೇಶಕರಾದ ಟಿ.ಆರ್.ಚಂದ್ರಶೇಖರ ಅವರಿಗೂ ಹಾಗೂ ಈಗಿನ ಅಧ್ಯಯನಾಂಗದ ನಿರ್ದೇಶಕರಾದ ಡಾ.ಪಾಂಡುರಂಗಬಾಬು ಅವರಿಗೆ, ಪ್ರಸಾರಾಂಗದ ನಿರ್ದೇಶಕರು ಮತ್ತು ಭಾಷಾ ನಿಕಾಯದ ಡೀನ್‌ರಾದ ಪ್ರೊ.ಮಲ್ಲೇಪುರಂ ಜಿ.ವೆಂಕಟೇಶ್ ಅವರಿಗೆ, ಅಧ್ಯಯನದ ಕ್ರಮವನ್ನು ಬೋಧಿಸಿ ಪ್ರೀತಿಯಿಂದ ಕಾಳಜಿವಹಿಸಿ ಮಾರ್ಗದರ್ಶನ ನೀಡಿದ ಡಾ.ಎಂ.ಉಷಾ ಅವರಿಗೆ.

ಅಧ್ಯಯನದ ಅವಧಿಯಲ್ಲಿ ಪೂರಕ ಅಂಶಗಳನ್ನು ನೀಡಿ ಬರವಣಿಗೆಯನ್ನು ಗಮನಿಸಿ ಪ್ರೋತ್ಸಾಹಿಸಿದ ಡಾ.ಎಂ.ಉಷಾ, ಭಾಷಾಂತರ ಅಧ್ಯಯನ ವಿಭಾಗದ ಮುಖ್ಯಸ್ಥರಾದ ಡಾ.ವಿ.ಬಿ.ತಾರಕೇಶ್ವರ, ಡಾ.ಮೋಹನ್ ಕುಂಟಾರ, ಡಾ.ವಿಠಲರಾವ್ ಗಾಯಕ್ವಾಡ ಮುಂತಾದ ವಿಶ್ವವಿದ್ಯಾಲಯದ ಎಲ್ಲಾ ಗುರು ವೃಂದಕ್ಕೂ.

ವಿಭಾಗದ ಹಿರಿಯರಾದ, ಪ್ರಹ್ಲಾದ, ಹೇಮರೆಡ್ಡಿ ಇವರಿಗೆ ನನ್ನ ಸಹಪಾಠಿಗಳಾದ ಮಾಣಿಕಪ್ಪ ಬೇಗಾರ್, ಸಾವಿತ್ರಿ ಪವಾರ್ ಮತ್ತು ಒ.ಬಿ.ಸಿ ಹಾಸ್ಟೆಲ್‌ನ ಎಲ್ಲಾ ಸ್ನೇಹಿತವರ್ಗಕ್ಕೂ, ಕನ್ನಡ ವಿಶ್ವವಿದ್ಯಾಲಯದ ಗ್ರಂಥಪಾಲಕರಿಗೂ ಗ್ರಂಥಾಲಯದ ಸಿಬ್ಬಂದಿವರ್ಗಕ್ಕೂ

ನನ್ನ ಬಾಳಿನಲ್ಲಿ ಜ್ಞಾನದ ದೀಪ ಹಚ್ಚಿದ ಶಿವಕುಮಾರ ಕಂಪ್ಲಿ. ಡಾ. ವಿಕ್ರಮ್ ವಿಸಾಜಿ, ವಿದ್ಯಾಭ್ಯಾಸಕ್ಕೆ ಒತ್ತಾಸೆಯಾಗಿ ನಿಂತ ಅಣ್ಣಂದಿರಾದ, ಗುರುಪ್ರಸಾದ್ , ಮಳಿಬಸಪ್ಪ, ಬಸವರಾಜ, ಅಮ್ಮ ಶಂಕ್ರಮ್ಮ ಅಪ್ಪ ರುದ್ರಪ್ಪ ಹಾಗೂ ಅಕ್ಕಂದರಿಗೂ, ತಂಗಿಯರಿಗೂ

ಅಕ್ಷರ ಸಂಯೋಜನೆಯನ್ನು ಮಾಡಿಕೊಟ್ಟ, ಶ್ರೀಮತಿ ಬಿ.ರಶ್ಮಿಕೃಪಾಶಂಕರ್ ಅವರಿಗೆ

*ಕೃತಜ್ಞತೆಗಳು*

**ಸತ್ಯಮೂರ್ತಿ ಹೆಚ್.**

# ಪರಿವಿಡಿ

೧

# ಅಧ್ಯಯನದ ಉದ್ದೇಶ, ವ್ಯಾಪ್ತಿ, ಸ್ವರೂಪ ಮತ್ತು ಮಹತ್ವ

## ೧.೧. ಅಧ್ಯಯನದ ಉದ್ದೇಶ

ಯಾವುದೇ ಭಾಷೆ ಮತ್ತು ಸಾಹಿತ್ಯದ ಸಂದರ್ಭದಲ್ಲಿ ಭಾಷಾಂತರಕ್ಕೆ ಮಹತ್ವದ ಸ್ಥಾನವಿದೆ. ಅಂತೆಯೇ ಕನ್ನಡದಲ್ಲಿಯೂ ಹೆಚ್ಚು ಕಡಿಮೆ ಸಾಹಿತ್ಯೋದಯದ ಜೊತೆ ಜೊತೆಗೆ ಭಾಷಾಂತರ ಪ್ರಕ್ರಿಯೆಯು ಬೆಳೆದು ಬಂದಿದೆ. ಪ್ರಾರಂಭದಲ್ಲಿ ಸಂಸ್ಕೃತ, ಪ್ರಾಕೃತಗಳಿಂದ ನಂತರದಲ್ಲಿ ಇಂಗ್ಲಿಷ್, ಬಂಗಾಳಿ, ಮರಾಠಿ ಇನ್ನಿತರ ಭಾಷೆಗಳಿಂದ ಭಾಷಾಂತರ ನಡೆದಿದೆ. ಆಧುನಿಕ ಪೂರ್ವದಲ್ಲಿ ರಾಮಾಯಣ ಮಹಾಭಾರತದಂತ ಆದಿಕಾವ್ಯಗಳು, ಜೈನ, ವೈದಿಕ, ಇತ್ಯಾದಿ ಧರ್ಮಗಳ ಧಾರ್ಮಿಕ ಕೃತಿಗಳು ವೈದ್ಯ, ಅಶ್ವಶಾಸ್ತ್ರ, ಸೂಪಶಾಸ್ತ್ರ, ಕಾವ್ಯಮೀಮಾಂಸೆ ಮುಂತಾದ ಶಾಸ್ತ್ರ ಸಂಬಂಧಿತ ಕೃತಿಗಳು ಕನ್ನಡಕ್ಕೆ ಪ್ರಮುಖ ವಾಗಿ ಭಾಷಾಂತರಗೊಂಡರೆ ಆಧುನಿಕ ಸಂದರ್ಭದಲ್ಲಿ ಕಾವ್ಯ, ನಾಟಕ, ಕಾದಂಬರಿ, ಕಥೆ ಮುಂತಾದ ಸಾಹಿತ್ಯ ಪ್ರಕಾರಗಳು ಮತ್ತು ವಿಜ್ಞಾನ, ತಂತ್ರಜ್ಞಾನ ಸಮಾಜ ವಿಜ್ಞಾನ ಮುಂತಾದ ಸಾಹಿತ್ಯೇತರ ಜ್ಞಾನಶಿಸ್ತುಗಳಿಗೆ ಸಂಬಂಧಿಸಿದ ಅಸಂಖ್ಯಾತ ಭಾಷಾಂತರ ಕೃತಿಗಳನ್ನು ಕನ್ನಡದಲ್ಲಿ ನೋಡಬಹುದು.

ಕನ್ನಡದಲ್ಲಿ ಭಾಷಾಂತರ ಪ್ರಕ್ರಿಯೆ ವಿಪುಲವಾಗಿ ನಡೆದಿದ್ದರೂ ಕನ್ನಡದಲ್ಲಿ ಸಾವಿರಾರು ಭಾಷಾಂತರಕಾರರು ಭಾಷಾಂತರ ಕಾರ್ಯದಲ್ಲಿ ತೊಡಗಿದ್ದರೂ, ಭಾಷಾಂತರ ಪ್ರಕ್ರಿಯೆಯನ್ನು ಕುರಿತು ಮಾತನಾಡಿದ್ದು ಕಡಿಮೆ. ಹೀಗೆಯೇ ಅಧ್ಯಯನ ಶಿಸ್ತುಗಳು ಭಾಷಾಂತರ ಪ್ರಕ್ರಿಯೆಯನ್ನು ಪೂರ್ವಾಗ್ರಹ ಪೀಡಿತ ನೆಲೆಯಲ್ಲಿ ಪರಿಭಾವಿಸಿದ್ದರಿಂದ ವಿದ್ವತ್ ಲೋಕದಲ್ಲಿ ಈ ಕುರಿತಂತೆ ನಡೆದ ಚರ್ಚೆಗಳು ಅತ್ಯಲ್ಪ ಹಾಗೂ ಪೂರ್ವಾಗ್ರಹ ಪೀಡಿತವಾದವು. ಹಾಗಾಗಿಯೇ ಇವು ಬಹುಪಾಲು ಪಶ್ಚಿಮದ ಹೇಳಿಕೆಗಳನ್ನು ಉಕ್ತಿಸುವ ಅಥವಾ ನಿರಾಕರಿಸುವ ಸರಳ ಕೆಲಸದಲ್ಲಿ ನಿರತವಾಗಿವೆಯೇ ಹೊರತು ತಮ್ಮದೇ ಆದ ವಿಶ್ಲೇಷಣೆಯೊಂದಿಗೆ ರೂಪುಗೊಂಡದ್ದಾಗಿಲ್ಲ. ಇಷ್ಟಾಗಿಯೂ ಕನ್ನಡದ ಸಂದರ್ಭವು ಭಾಷಾಂತರ ಚಿಂತನೆಯ ಸಂದರ್ಭದಲ್ಲಿ ತೀರ ನಿರಾಶಾದಾಯಕವಾದುದೇನಲ್ಲ. ಇಲ್ಲಿ ಭಾಷಾಂತರದ ಬಗ್ಗೆ ಪ್ರಜ್ಞಾ ಪೂರ್ವಕವಾದ ವ್ಯಾಖ್ಯಾನಗಳು, ಅಧ್ಯಯನಶೀಲವಾದ ದೀರ್ಘ ಚರ್ಚೆಗಳ ಕೊರತೆ ಇರುವುದು ಅದು ಸಂಪೂರ್ಣ ಶೂನ್ಯದ ಪರಿಸ್ಥಿತಿಯಲ್ಲ. ಏಕೆಂದರೆ ಹಲವು ಭಾಷಾಂತರಕಾರರು ತಾವು ಭಾಷಾಂತರ ಮಾಡಿದ ಕೃತಿಗಳ ಮುನ್ನುಡಿ ಮತ್ತು ಹಿನ್ನುಡಿಗಳಲ್ಲಿ ತಾವು ಕೈಗೊಂಡ ಭಾಷಾಂತರ ಕುರಿತಂತೆ ಕೆಲವು ಮಾತುಗಳನ್ನು

ಹೇಳಿರುವುದನ್ನು ಗಮನಿಸಬಹುದು. ಇಂತಹ ಅನೇಕ ಹೇಳಿಕೆಗಳ ಮೂಲಕವೇ ಭಾಷಾಂತರ ಚಿಂತನೆಗಳು ಅಲ್ಲಲ್ಲಿ ಬಿಡಿ ಬಿಡಿಯಾಗಿ ಹಂಚಿ ಹೋಗಿವೆ. ಹಾಗೆಯೇ ಎ.ಆರ್.ಕೃಷ್ಣಶಾಸ್ತ್ರಿ, ಕೆ.ಕೃಷ್ಣಮೂರ್ತಿ, ಕೀರ್ತಿನಾಥ ಕುರ್ತುಕೋಟಿ ಮುಂತಾದವರು ನಡೆಸಿದ ಅಧ್ಯಯನಗಳು ಕನ್ನಡದ ಮಟ್ಟಿಗೆ ಈವತ್ತಿನ ಹಲವು ಚರ್ಚೆಗಳಿಗೆ ನಮ್ಮನ್ನು ಒಯ್ಯುವಂತಾಗಿದೆ.

ಭಾಷಾಂತರಕಾರರು ತಮ್ಮ ಭಾಷಾಂತರ ಕೃತಿಗಳ ಬಗ್ಗೆ ಸಾಂದರ್ಭಿಕವಾಗಿ ಹೇಳಿದ ಮಾತುಗಳು ಕೆಲವೊಂದು ಕೃತಿಗಳಲ್ಲಿ ದಾಖಲಾಗಿವೆ. ಇವು ಭಾಷಾಂತರವನ್ನು ಕುರಿತು ಸಮಗ್ರ ಚಿಂತನೆಯ ಪರಿಣಾಮವಾಗಿ ಮೂಡಿಬಂದವುಗಳಲ್ಲ ಎಂಬುದು ವಾಸ್ತವ. ಆದರೆ ಭಾಷಾಂತರವನ್ನು ಕುರಿತು ಈ ಹೇಳಿಕೆಗಳು ಆಯಾ ಕೃತಿಗಳ ಸಂದರ್ಭ, ವಸ್ತು, ವಿಷಯಗಳಿಗೆ ಸಂಬಂಧಿಸಿದಂತೆ ಭಾಷಾಂತರದ ಚಿಂತನೆಯ ಭಾಗವಾಗಿ ರೂಪಗೊಂಡವುಗಳು. ಹಾಗಾಗಿ ಈ ಚಿಂತನೆಗಳು ಕೃತಿಗಳ ಸಂದರ್ಭದಿಂದ ಬೇರೆಯಾಗಿ ನೋಡಿದರೂ ಭಾಷಾಂತರ ಚಿಂತನೆಯ ಭಾಗವಾಗಿ ಹೊಸ ನೆಲೆಯಲ್ಲಿ ಯೋಚಿಸಲು ದಾರಿ ಮಾಡಿಕೊಡಬಲ್ಲವು. ಕೆಲವೊಂದು ಸಂದರ್ಭದಲ್ಲಿ ಆಯಾ ಕೃತಿಗಳ ಮುನ್ನುಡಿ, ಹಿನ್ನುಡಿ, ಬೆನ್ನುಡಿಗಳ ರೂಪದಲ್ಲೂ ಮೆಚ್ಚುಗೆಯನ್ನು ವ್ಯಕ್ತಪಡಿಸಲು ಅಥವಾ ವಿಮರ್ಶಾತ್ಮಕವಾಗಿಯೇ ಭಾಷಾಂತರ ಕುರಿತ ಚಿಂತನೆಯನ್ನು ಭಾಷಾಂತರಕಾರರು, ಆಸಕ್ತ ಓದುಗರು ಹಾಗೂ ವಿದ್ವಾಂಸರು ಹೇಳಿದ್ದಾರೆ. ಇಂತಹ ಚಿಂತನೆಗಳೆಲ್ಲವನ್ನು ಬಿಡಿಬಿಡಿಯಾಗಿ ನೋಡದೆ ಒಂದೆಡೆ ಕ್ರೋಢೀಕರಿಸಿ ಭಾಷಾಂತರ ಸ್ವರೂಪ, ಅಗತ್ಯ ಮತ್ತು ವಿಧಾನಗಳ ಕುರಿತಂತೆ ವಿಶ್ಲೇಷಣೆ ಮಾಡಲು ಅವಕಾಶವಿದೆ ಎಂದು ಭಾವಿಸಿ ಪ್ರಸ್ತುತ ವಿಷಯವನ್ನು ಆಯ್ಕೆ ಮಾಡಲಾಗಿದೆ.

ಕನ್ನಡದಲ್ಲಿ ದೊರೆಯುವ ಭಾಷಾಂತರ ಚಿಂತನೆಗಳನ್ನು ಕ್ರೋಢೀಕರಿಸಿ, ವಿಶ್ಲೇಷಿಸುವುದರ ಮೂಲಕ ಕನ್ನಡದಲ್ಲಿನ ಭಾಷಾಂತರ ಚಿಂತನೆಯನ್ನು ಕಂಡುಕೊಳ್ಳುವುದು ಸಾಧ್ಯ ಎಂಬ ಆಲೋಚನೆಯೊಂದಿಗೆ ಪ್ರಸ್ತುತ ಅಧ್ಯಯನವನ್ನು ಕೈಗೊಳ್ಳಲು ಉದ್ದೇಶಿಸಲಾಗಿದೆ.

ಕನ್ನಡದಲ್ಲಿ ವಿಭಿನ್ನ ಭಾಷಾಂತರಕಾರರು ವಿಭಿನ್ನ ಭಾಷೆಯ ಕೃತಿಗಳನ್ನು ಭಾಷಾಂತರಿಸುವಾಗ ಎದುರಾಗುವ ಮೂಲನಿಷ್ಠತೆ, ಉಪಯುಕ್ತತೆ, ಸ್ಥಾನಮಾನದ ಪ್ರಶ್ನೆಗಳನ್ನು ಹೇಗೆ ಅರ್ಥೈಸಿಕೊಂಡಿದ್ದಾರೆ ಎಂಬುದು ಅವರ ಮುನ್ನುಡಿಯ ಮಾತುಗಳ ಸಂದರ್ಭದಲ್ಲಿ ಪ್ರಕಟಿಸಿರುವುದನ್ನು ಕೆಲವೊಂದು ಕೃತಿಗಳಲ್ಲಿ ಕಂಡುಕೊಳ್ಳಬಹುದು. ಕನ್ನಡದ ಅಪಾರ ಸಂಖ್ಯೆಯ ಭಾಷಾಂತರಗಳು ಈ ಭಾಷಿಕ ಸಂದರ್ಭದ ಕೊರತೆಯನ್ನು ತುಂಬಿಕೊಡುವ ಸಲಕರಣೆಯಾಗಿ ಬಳಕೆಯಾಗಿರುವುದನ್ನು ಗುರುತಿಸುವುದು ಮತ್ತು ಭಾಷಾಂತರ ಪ್ರಕ್ರಿಯೆಯನ್ನು ಕುರಿತು ಬಿಡಿಬಿಡಿಯಾದ ಪ್ರತಿಮಾತ್ಮಕ ಅಭಿಪ್ರಾಯಗಳನ್ನು ರೂಪಿಸುವುದರ ಹಿಂದಿನ ಉದ್ದೇಶವನ್ನು ವಿವರಿಸಿಕೊಳ್ಳುವುದು ಈ ಅಧ್ಯಯನದ ಉದ್ದೇಶವಾಗಿದೆ.

ಸಾಹಿತ್ಯ ಮತ್ತು ಸಾಹಿತ್ಯೇತರ ಭಾಷಾಂತರಗಳು ತನ್ನದೇ ಆದ ಭಾಷಾಂತರದ ಸ್ವರೂಪ ಮತ್ತು ನಿಲುವುಗಳನ್ನು ಹೊಂದಿರುತ್ತವೆ ಎಂಬ ನಿಲುವಿದೆ. ಈ ಹಿನ್ನೆಲೆಯಲ್ಲಿ

೧. ಭಾಷಾಂತರವನ್ನು ಯಾವುದಕ್ಕೆ ಮಾಡುತ್ತಿದ್ದೇನೆ? ಇದರ ಅಗತ್ಯವೇನು?

೨. ಭಾಷಾಂತರವನ್ನು ಹೇಗೆ ಮಾಡುತ್ತಿದ್ದೇನೆ? ಇದರ ಅಗತ್ಯವೇನು?

ಇತ್ಯಾದಿ ಕುರಿತ ಅವರ ಪ್ರಾಸ್ತಾವಿಕ ಮಾತುಗಳನ್ನು ನಾವು ಒಗ್ಗೂಡಿಸಿ ಪರಿಶೀಲಿಸುವುದಾದರೆ ಅದು ನಮಗೆ ಕನ್ನಡದ ಭಾಷಾಂತರ ಚಿಂತನೆಯ ಸ್ವರೂಪವನ್ನು ಒದಗಿಸಬಹುದು.

ಆಧುನಿಕೋತ್ತರ ಸಂದರ್ಭದಲ್ಲಿ ಭಾಷಾಂತರ ಅಧ್ಯಯನವು ತನ್ನದೇ ಆದ ವ್ಯಾಪ್ತಿಯನ್ನು ಕಂಡುಕೊಳ್ಳುತ್ತಿರುವ ಹಿನ್ನೆಲೆಯಲ್ಲಿ ಕನ್ನಡದ ಸಂದರ್ಭದಲ್ಲಿಯ ಭಾಷಾಂತರಕಾರರು ಭಾಷಾಂತರ ಚಟುವಟಿಕೆಯನ್ನು, ಪ್ರಕ್ರಿಯೆಯನ್ನು ಹೇಗೆ ಗ್ರಹಿಸಿದ್ದಾರೆ ಎಂಬುದು ಅಧ್ಯಯನದ ಯೋಗ್ಯ ಸಂಗತಿಯಾಗಿದೆ.

ಈ ಹಿನ್ನೆಲೆಯಲ್ಲಿ ಪ್ರಸ್ತುತ ಅಧ್ಯಯನದಲ್ಲಿ ಕನ್ನಡ ಭಾಷಾಂತರಕಾರರ ಭಾಷಾಂತರ ಕೃತಿಗಳ ಮುನ್ನುಡಿ, ಬೆನ್ನುಡಿಗಳಲ್ಲಿನ ಭಾಷಾಂತರ ಕುರಿತ ಚಿಂತನೆಗಳನ್ನು ಕ್ರೋಢಿಕರಿಸಿ ವಿಶ್ಲೇಷಿಸುವುದರ ಮೂಲಕ ಮುಂದಿನ ಭಾಷಾಂತರಕಾರರಿಗೆ ಭಾಷಾಂತರ ಕುರಿತ ಚಿಂತನೆ ಬೆಳೆಸಿಕೊಳ್ಳಲು ಅಳಿಲು ಸೇವೆ ಮಾಡುವುದರ ಮೂಲಕ ಮಾಹಿತಿಯನ್ನು ಒದಗಿಸಿಕೊಡುವುದೇ ಈ ಅಧ್ಯಯನದ ಬಹುಮುಖ್ಯ ಉದ್ದೇಶವಾಗಿದೆ.

## ೧.೨. ಅಧ್ಯಯನದ ವ್ಯಾಪ್ತಿ

ಕನ್ನಡದಲ್ಲಿ ಭಾಷಾಂತರ ಕುರಿತ ಚಿಂತನೆಗಳು ಎಂಬ ಈ ನಿಬಂಧದಲ್ಲಿ ನಾವು ಪಾಶ್ಚಾತ್ಯ ಭಾಷೆಗಳಾದ ಇಂಗ್ಲಿಷ್, ಗ್ರೀಕ್ ಇತ್ಯಾದಿ ಹಾಗೂ ಭಾರತೀಯ ಭಾಷೆಗಳಾದ ಸಂಸ್ಕೃತ, ಪ್ರಾಕೃತ, ಬಂಗಾಳಿ, ಹಿಂದಿ, ತಮಿಳು, ತೆಲುಗು, ಮಲೆಯಾಳಂ, ಮರಾಠಿ, ಭಾಷೆಗಳಿಂದ ಕನ್ನಡಕ್ಕೆ ಅನುವಾದಿತಗೊಂಡ ಕೃತಿಗಳ ಮುನ್ನುಡಿ, ಬೆನ್ನುಡಿಗಳಲ್ಲಿನ ಭಾಷಾಂತರಕಾರರ ಭಾಷಾಂತರ ಕುರಿತ ಚಿಂತನೆಗಳನ್ನು ಆಕರವಾಗಿ ಕೊಂಡು ಈ ಅಧ್ಯಯನದಲ್ಲಿ ಬಳಸಿಕೊಳ್ಳಲಾಗಿದೆ. ಭಾಷಾಂತರಕಾರರ ಭಾಷಾಂತರ ಕುರಿತ ಚಿಂತನೆಗಳ ಸಂಗ್ರಹದ ಜೊತೆಗೆ ಅವರ ಚಿಂತನೆಗಳನ್ನು ವಿಶ್ಲೇಷಣೆ ಮಾಡುವುದರ ಮೂಲಕ ಹೊಸ ಹೊಸ ಆಲೋಚನೆಗಳನ್ನು ಸಂಗ್ರಹಿಸಲು ಇಲ್ಲಿ ಪ್ರಯತ್ನಿಸಲಾಗಿದೆ. ತಾತ್ವಿಕವಾಗಿ ಪರಿಗಣಿಸುವುದಾದರೆ ಸಾವಿರಾರು ವರ್ಷಗಳ ಇಡೀ ಕನ್ನಡ ಕಾವ್ಯ ಪರಂಪರೆಯನ್ನು ಭಾಷಾಂತರ ಪರಂಪರೆ ಎಂದು ಗುರುತಿಸಬಹುದಾಗಿದೆ. ಹಾಗಾಗಿ ಅವುಗಳನ್ನು ಇಡಿಯಾಗಿ ಸ್ವೀಕರಿಸುವುದು ಕಷ್ಟಸಾಧ್ಯವಾದುದು. ಹಾಗಾಗಿ ಭಾಷೆಗಳ ಎಲ್ಲಾ ಕೃತಿಗಳನ್ನು ಅಧ್ಯಯನದ ಅವಧಿಯಲ್ಲಿ ದೊರಕಿಸಿಕೊಳ್ಳಲು ಸಾಧ್ಯವಾಗದ ಕಾರಣ ಕೆಲವು ಪ್ರಾತಿನಿಧಿಕ ಕೃತಿಗಳ ಮುನ್ನುಡಿಗಳನ್ನು ಮಾತ್ರ ನಿಬಂಧದ ವ್ಯಾಪ್ತಿಯಲ್ಲಿ ಚರ್ಚಿಸಲಾಗಿದೆ.

ಈ ಹಿನ್ನೆಲೆಯಲ್ಲಿ ಎಂ.ಫಿಲ್ ಅಧ್ಯಯನದ ಅಗತ್ಯಕ್ಕನುಗುಣವಾಗಿ ಆಯ್ದ ಅಂದರೆ ಮಹತ್ವದ ಕೆಲವು ಮುನ್ನುಡಿಗಳನ್ನು ಬಳಸಿಕೊಳ್ಳುವ ಮೂಲಕ ಇಲ್ಲಿನ ಚರ್ಚೆಯನ್ನು ನಡೆಸುವುದು ಹಾಗೆ ನೋಡಿದರೆ ಕನ್ನಡದ ಬಹುಪಾಲು ಭಾಷಾಂತರಕಾರರು ಮೌನವಾಗಿ ತಮ್ಮ ಕೆಲಸ ನಿರ್ವಹಿಸಿದ್ದಾರೆ.

## ೧.೩. ಅಧ್ಯಯನದ ಸ್ವರೂಪ

ಪ್ರಸ್ತುತ ಪ್ರಬಂಧವನ್ನು ಅಧ್ಯಯನದ ಸೌಲಭ್ಯಕ್ಕಾಗಿ ಐದು ಅಧ್ಯಾಯಗಳಲ್ಲಿ ವಿಂಗಡಿಸಲಾಗಿದೆ.

೧. ಮೊದಲನೇ ಅಧ್ಯಾಯದಲ್ಲಿ ಅಧ್ಯಯನದ ಉದ್ದೇಶ, ವ್ಯಾಪ್ತಿ, ಸ್ವರೂಪ ಮತ್ತು ಮಹತ್ವವನ್ನು ಕುರಿತಂತೆ ಗಮನಹರಿಸಲಾಗಿದೆ.

೨. ಎರಡನೇ ಅಧ್ಯಾಯದಲ್ಲಿ ಭಾಷಾಂತರದ ಹುಟ್ಟು ಮತ್ತು ಬೆಳವಣಿಗೆ ಕುರಿತಂತೆ ಇದುವರೆಗೆ ನಡೆದಿರುವ ಚರ್ಚೆಯನ್ನು ಕ್ರೋಢೀಕರಿಸಲಾಗಿದೆ. ಈ ಸಾಹಿತ್ಯ ಸಮೀಕ್ಷೆಯಲ್ಲಿ ಪಾಶ್ಚಾತ್ಯ ಮತ್ತು ಭಾರತೀಯ ಹಾಗೂ ವಿಶೇಷವಾಗಿ ಕನ್ನಡದ ಸಂದರ್ಭದ ಮಾಹಿತಿಯನ್ನು ಕಲೆ ಹಾಕಲಾಗಿದೆ. ಈ ಅಧ್ಯಯನವು ಪ್ರಸ್ತುತ ಅಧ್ಯಯನಕ್ಕೆ ಬೇಕಾದ ಮಾಹಿತಿಯನ್ನು ಒದಗಿಸಿಕೊಡುವುದಾಗಿದೆ.

೩. ಮೂರನೇ ಅಧ್ಯಾಯದಲ್ಲಿ ವಿವಿಧ ಪ್ರಮುಖ ಭಾಷಾಂತರ ಚಿಂತನೆಗಳನ್ನು ಕ್ರೋಢೀಕರಿಸಲಾಗಿದೆ ಮತ್ತು ಚಿಂತನೆಯ ಸ್ವರೂಪವನ್ನು ಗ್ರಹಿಸಲು ಪ್ರಯತ್ನಿಸಲಾಗಿದೆ.

೪. ನಾಲ್ಕನೆ ಅಧ್ಯಾಯದಲ್ಲಿ ಭಾಷಾಂತರ ಕುರಿತಂತೆ ಕನ್ನಡದ ಭಾಷಾಂತರಕಾರರು ಹಾಗೂ ಭಾಷಾಂತರ ಚಿಂತನಾಕಾರರು ವ್ಯಕ್ತಪಡಿಸಿದ ಮುಖ್ಯ ವಿಚಾರಗಳಾದ ಮೂಲನಿಷ್ಠತೆ, ಉಪಯುಕ್ತತೆ ಮತ್ತು ಸ್ಥಾನಮಾನದ ಪ್ರಶ್ನೆಯನ್ನು ಪರಿಶೀಲಿಸುವುದರೊಂದಿಗೆ ಸಮಾಜವೊಂದರ ಕೊರತೆಯನ್ನು ತುಂಬಿಕೊಡುವ ಸಲಕರಣೆಯಾಗಿ ಭಾಷಾಂತರವನ್ನು ಗುರುತಿಸಿಕೊಂಡಿರುವ ಕ್ರಮ ಮತ್ತು ಭಾಷಾಂತರ ಕುರಿತ ಪ್ರತಿಮಾತ್ಮಕ ಹೇಳಿಕೆಗಳ ಹಿನ್ನೆಲೆಯಲ್ಲಿನ ಚಿಂತನೆಗಳನ್ನು ವಿಶ್ಲೇಷಣೆಗೆ ಒಳಪಡಿಸಲಾಗುವುದು.

೫. ಐದನೇ ಅಧ್ಯಾಯದಲ್ಲಿ ಸಮಾರೋಪದಲ್ಲಿ ಪ್ರಸ್ತುತ ಅಧ್ಯಯನದ ಫಲಿತಗಳನ್ನು ಕುರಿತು ಚರ್ಚಿಸಲಾಗಿದೆ. ಹಾಗೆ ಕೊನೆಯಲ್ಲಿ ಪರಾಮರ್ಶನ ಗ್ರಂಥಗಳನ್ನು ಕೊಡಲಾಗಿದೆ.

## ೧.೪. ಅಧ್ಯಯನದ ಮಹತ್ವ

ಆಧುನಿಕ ಯುಗ ಭಾಷಾಂತರದ ಯುಗವಾಗಿರುವುದರಿಂದ ಇಂದು ಭಾಷಾಂತರ ಸಮಾಜದ ಎಲ್ಲಾ ಕ್ಷೇತ್ರಗಳಲ್ಲೂ ನಡೆಯುವಂತಹ ಕಾರ್ಯವಾಗಿದೆ. ಕೀರ್ತಿನಾಥ ಕುರ್ತುಕೋಟಿಯವರು ತಮ್ಮ ಬಯಲು ಆಲಯ ಕೃತಿಯಲ್ಲಿ ಭಾಷಾಂತರದ ವ್ಯಾಪ್ತಿಯನ್ನು ಈ ರೀತಿ ಹೇಳಿದ್ದಾರೆ. "ಭಾಷಾಂತರವೊಂದು ಮುಖ್ಯವಾಗಿ ಒಂದು ಸಂಸ್ಕೃತಿಯ ವಿನಿಯಮ, ಒಂದು ಭಾಷೆಯ ಅರ್ಥಸಂಚಯವನ್ನು ಇನ್ನೊಂದು ಭಾಷೆಗೆ ಹೊಯ್ಯುವಾಗ ಅನೇಕ ವಿಸ್ಮಯಕಾರಿಯಾದ ಬದಲಾವಣೆಗಳಾಗುತ್ತವೆ. ಅಂದರೆ ಬದಲಾವಣೆ ಈ ವ್ಯಾಪಾರದಲ್ಲಿ ಅನಿವಾರ್ಯವಾಗುತ್ತದೆ. ಅಲ್ಲದೆ ಭಾಷಾಂತರದ ವ್ಯಾಪಾರ ಕೇವಲ ಶಾಬ್ದಿಕ ಭಾಷೆಗಳಿಗಷ್ಟೇ ಸೀಮಿತವಾಗಿರುವುದಿಲ್ಲ. ಶಾಬ್ದಿಕ ಭಾಷೆಯಂತೆ ಬೇರೆ ಬಗೆಯ ಭಾಷೆಗಳನ್ನು ನಾವು ನಿರ್ಮಿಸಿಕೊಂಡಿರುತ್ತೇವೆ. ನಮ್ಮ ವಾಸ್ತುಶಿಲ್ಪ, ಪುರಾಣ ಕತೆಗಳು, ಮನರಂಜನೆಯ ಸಾಧನೆಗಳಾದ

ಸಂಗೀತ, ನಾಟಕ ಮತ್ತು ನೃತ್ಯ ಪ್ರಕಾರಗಳು ಮೊದಲಾದವು ಕೂಡ ವಿವಿಧವಾದ ಭಾಷೆಗಳೇ ಆಗಿವೆ. ಈ ಭಾಷೆಗಳಲ್ಲಿ ಕೂಡ ಭಾಷಾಂತರ ಕಾರ್ಯ ನಡೆದೆ ಇರುತ್ತದೆ. ಒಂದು ಮನೆತನದ ಹೆಣ್ಣನ್ನು ಇನ್ನೊಂದು ಮನೆತನಕ್ಕೆ, ಮದುವೆ ಮಾಡಿಕೊಡುವುದು ಆಸ್ತಿಯ ಕ್ರಯ ವಿಕ್ರಯ, ಮತಾಂತರ ಹೊಂದುವುದು, ದೇಶಾಂತರದಲ್ಲಿ ಹೋಗಿ ನೆಲೆಸುವುದು ಮೊದಲಾದ ಸಂಗತಿಗಳೆಲ್ಲ ಭಾಷಾಂತರ ಕ್ರಿಯೆಗಳೇ ಆಗಿವೆ."[೧]

ಕುರ್ತುಕೋಟಿಯವರು ಇನ್ನು ಒಂದು ಹೆಜ್ಜೆ ಮುಂದೆ ಹೋಗಿ "ಭಾಷಾಂತರ ಎಂಬ ಪದವನ್ನು ಕೂಡ ಕೇವಲ ಅದರ ವಾಚ್ಯಾರ್ಥದಲ್ಲಿ ಮಾತ್ರ ಗ್ರಹಿಸದೆ ಅದರ ರೂಪಕಾರ್ಥಗಳಲ್ಲಿ ಕೂಡ ಸ್ವೀಕರಿಸಬೇಕು. ಬ್ರಿಟಿಷರ ಸಂಪರ್ಕ, ನಮಗೆ ಬಂದ ಮೇಲೆ ನಮ್ಮ ದೇಶದಲ್ಲಿ ನಡೆದ ಎಲ್ಲಾ ಬದಲಾವಣೆಯ ಪ್ರಕ್ರಿಯೆಗಳು ಒಂದು ದೃಷ್ಟಿಯಿಂದ ಭಾಷಾಂತರಗಳೇ ಆಗಿವೆ. ವಿದ್ಯಾವಂತರು ಇಂಗ್ಲಿಷ್ ಭಾಷೆಯನ್ನು ಕಲಿತದ್ದು, ಮಿಷನರಿಗಳು ಮತಾಂತರ ನಡೆಸಿದ್ದು, ಭೂಮಿಗಳನ್ನು ವಿಂಗಡಿಸಿ ಜಮೀನ್ದಾರಿ ರೈತವಾರಿಯಂಥ ವ್ಯವಸ್ಥೆಯಲ್ಲಿ ಅವುಗಳಲ್ಲಿ ಸೇರಿಸಿದ್ದು, ಸಂಚಾರದ ಹೊಸ ಸಾಧನಗಳು, ರಸ್ತೆಗಳು, ಅಂಚೆ ತಂತಿಯಂಥ ಹೊಸ ವ್ಯವಸ್ಥೆಗಳು, ಕೋರ್ಟು ಕಛೇರಿಗಳು, ಇಂಥ ಎಲ್ಲಾ ಕಾರ್ಯವ್ಯವಸ್ಥೆಗಳು ಭಾಷಾಂತರದ ರೂಪಗಳೇ ಆಗಿವೆ."[೨]

ಪಾಶ್ಚಾತ್ಯರ ವ್ಯಾಖ್ಯಾನದ ಮೂಲಕ ಭಾಷಾಂತರದ ಮಹತ್ವ ತಿಳಿಯುವುದಾದರೆ "Nothing moves without translation, human experience is covered by three terms; emotions, technigues, thought. Emotion (fear etc) do not change in character, toughts and techniques do. No change in thought or technique spreads without the help of translation, because, if it is to spread it has to spread from people to people and there for-from language to language."

ಇ.ಇಸ್.ಬೇಟ್ಸ್‌ನ ಈ ಹೇಳಿಕೆ ಭಾಷಾಂತರದ ಅಗತ್ಯ ಮತ್ತು ಪ್ರಯೋಜನಗಳನ್ನು ಸಾರರೂಪದಲ್ಲಿ ಸಾದರಪಡಿಸುತ್ತದೆಂದು ಹೇಳಬಹುದು. Emotion, thought ಮತ್ತು fechnigue ಶಬ್ದಗಳು ಮಾನವ ಸಮುದಾಯಕ್ಕೆ ಸಾಮಾನ್ಯವಾಗಿರುವಂಥ ಅನುಭವಗಳನ್ನು ಒಳಗೊಂಡಿರುವ ಸಾಹಿತ್ಯವನ್ನೂ, ಜಾಗತಿಕ ಜ್ಞಾನ, ವಿಜ್ಞಾನ ಮತ್ತು ತಂತ್ರಜ್ಞಾನವನ್ನೂ ಒಟ್ಟಿನಲ್ಲಿ ಮಾನವನ ಬೌದ್ಧಿಕ ಮತ್ತು ಆಧ್ಯಾತ್ಮಿಕ ಚಟುವಟಿಕೆಗಳೆಲ್ಲವನ್ನೂ ಸೂಚಿಸುತ್ತವೆ ಎಂದಿಟ್ಟುಕೊಂಡರೆ, ಆಗ ಭಾಷಾಂತರದ ವ್ಯಾಪ್ತಿ ಮತ್ತು ಮಹತ್ವ/ಅಗತ್ಯ ಮನದಟ್ಟಾಗುತ್ತವೆ.[೩]

ಇಷ್ಟಲ್ಲದೆ ಭಾಷಾಂತರವು ಇಂದು ಪತ್ರಿಕೆ, ಸಿನಿಮಾ, ದೂರದರ್ಶನ, ಸಂಗೀತ, ವ್ಯಾಪಾರ, ಜಾಹೀರಾತು, ಮುಂತಾದ ಕ್ಷೇತ್ರಗಳಲ್ಲಿ ಹಾಗೂ ಜನರ ಸಹಜ ಮಾತಿನಲ್ಲೂ ಭಾಷಾಂತರ ಕ್ರಿಯೆ ಸಹಜವಾಗಿ ನಡೆಯುತ್ತಿರುತ್ತದೆ. ಹೀಗೆ ನಡೆಯುತ್ತಿರುವ ಭಾಷಾಂತರದಿಂದ ಆಗುವ ಪರಮ

ಪ್ರಯೋಜನವೇನೆಂಬುದನ್ನು ರವೀಂದ್ರನಾಥ ಠಾಗೋರರ 'ಗೀತಾಂಜಲಿ'ಯ ಪದ್ಯವೊಂದು ಅತ್ಯಂತ ಹೃದಯಂಗಮವಾಗಿ ಮುಂದುವರಿಸುತ್ತದೆಂದು ಭಾವಿಸಬಹುದಾಗಿದೆ. ಈ ಪದ್ಯ ಈ ರೀತಿ ಇದೆ

Thou hast made me known to friends whom I know note
Thou hast given me seats in homes not my own.
Thou hast brought the distant near and made a brother of the stranger.
ನನ್ನನರಿಯದ ಗೆಳೆಯರಿಗೆ ನನ್ನ ಪರಿಚಯಿಸಿದೆ ನೀನು
ನನ್ನದಲ್ಲದ ಮನೆಗಳಲ್ಲಿ ದೊರಕಿಸಿದೆ ಎಡೆಯನು ನನಗೆ,
ಎಲ್ಲೊ ದೂರದಲಿ ಇದ್ದವನ ನೀನೆನಗೆ ತಂದೆಯತಿ ಹತ್ತಿರಕೆ
ಎಲ್ಲೊ ಅಪರಿಚಿತನಂತೆ ಇದ್ದವನ ಆಗಿಸಿದೆ ಸೋದರನಂತೆ

Thou (ನೀನು) ಎಂಬುದಕ್ಕೆ, 'ಭಾಷಾಂತರ' ಎಂದು ಅರ್ಥೈಸಿದರೆ ಅದು ಎಸಗುವ ಪವಾಡ ನಮ್ಮನ್ನು ಆಶ್ಚರ್ಯ ಚಕಿತರನ್ನಾಗಿ ಮಾಡುತ್ತದೆ. ಅಪರಿಚಿತರನ್ನು ಅದು ಸೋದರರನ್ನಾಗಿಸುತ್ತದೆ, ಸ್ನೇಹಿತರನ್ನಾಗಿಸುತ್ತದೆ, 'ನಮ್ಮದಲ್ಲದ ಮನೆಗಳಲ್ಲೂ ನಮಗೆ ಸ್ಥಾನವನ್ನು ಗಳಿಸಿಕೊಡುತ್ತದೆ; ದೇಶ ಕಾಲಗಳ ನಡುವಣ ಅಂತರವನ್ನು ತೊಡೆದು ಹಾಕುತ್ತದೆ.'[೪]

ಇಷ್ಟೊಂದು ವ್ಯಾಪ್ತಿ, ಮಹತ್ವ ಹೊಂದಿರುವ ಭಾಷಾಂತರವನ್ನು ಕುರಿತು ಚಿಂತನೆ ನಡೆಸಿರುವುದು ಬಹಳ ಕಡಿಮೆ. ಇಂದು ಇಡೀ ವಿಶ್ವವನ್ನು ಜಾಗತೀಕರಣದ ಮೂಲಕ ಒಟ್ಟುಗೂಡಿಸುವಲ್ಲಿ ಭಾಷಾಂತರ ಮಹತ್ವದ ಪಾತ್ರವಹಿಸುತ್ತಿದೆ. ಇಡೀ ಜಗತ್ತಿನಲ್ಲಿ ಕನ್ನಡಿಗರು ಬೆರೆತು ಕನ್ನಡ ಭಾಷೆ ಜಗತ್ತಿನಾದ್ಯಂತ ವ್ಯಾಪಿಸಬೇಕಾದರೆ ಭಾಷಾಂತರ ಕುರಿತು ಚಿಂತನೆ ನಡೆಸುವುದು ಬಹು ಮುಖ್ಯವಾಗಿದೆ. ಹಿಂದಿನಿಂದ ಹಲವಾರು ಭಾಷಾಂತರಕಾರರು ಭಾಷಾಂತರ ಪ್ರಕ್ರಿಯೆಯಲ್ಲಿ ತೊಡಗಿದ್ದರು. ಭಾಷಾಂತರವನ್ನು ಕುರಿತು ಅಲ್ಲಿ ಇಲ್ಲಿ ಸಭೆ ಸಮಾರಂಭಗಳಲ್ಲಿ ಸಣ್ಣ ಸಣ್ಣ ಲೇಖನಗಳಲ್ಲಿ, ತಮ್ಮ ಕೃತಿಗಳ ಮುನ್ನುಡಿ, ಬೆನ್ನುಡಿಗಳಲ್ಲಿ ಅಲ್ಪ ಸ್ವಲ್ಪ ಮಾತನಾಡಿದ್ದರೂ, ಅದು ಸಮಗ್ರವಾಗಿ ಒಂದೆಡೆ ದೊರೆಯದೆ ಇರುವುದರಿಂದ ಕನ್ನಡದಲ್ಲಿ ಭಾಷಾಂತರ ಕುರಿತ ಚಿಂತನೆ ನಡೆಸುವುದು ಅದಕ್ಕೆ ಅಗತ್ಯವಾದ ಮಾಹಿತಿಯನ್ನು ಕಲೆಹಾಕುವುದು ಇಂದು ಮಹತ್ವದ್ದಾಗಿದೆ.

**ಅಡಿಟಿಪ್ಪಣಿಗಳು**

೧. ಕುರ್ತಕೋಟಿ ಕೀರ್ತಿನಾಥ, ೧೯೯೨, ಬಯಲು ಆಲಯ, ಪು.೩೨

೨. ಕುರ್ತಕೋಟಿ ಕೀರ್ತಿನಾಥ, ೧೯೯೮, ನೂರುಮರ ನೂರು ಸ್ವರ, ಪು.೪

೩. ಪ್ರಧಾನ ಗುರುದತ್ತ, ೧೯೮೯, ಭಾಷಾಂತರ ಕಲೆ, ಪು.೨೧

೪. ಅದೇ, ಪು.೨೮,೨೯

೨

# ಭಾಷಾಂತರ ಬೆಳೆದು ಬಂದ ದಾರಿ

ಒಂದು ಭಾಷೆ, ಸಾಹಿತ್ಯದಷ್ಟೆ ಪ್ರಾಚೀನವಾದದ್ದು ಭಾಷಾಂತರ. ಪ್ರಪಂಚದಲ್ಲಿರುವ ಸಾವಿರಾರು ಭಾಷೆಗಳ ಉಗಮಕ್ಕೆ ಬೈಬಲ್‌ನಲ್ಲಿ ಒಂದು ಕಥೆಯಿದೆ. ಅದೇ ಭಾಷಾಂತರ ಉಗಮಕ್ಕೂ ಮತ್ತು ಅದರ ಪ್ರಾಮುಖ್ಯತೆಗೂ ಒಂದು ಮೂಕ ಸಾಕ್ಷಿಯಾಗಿದೆ. ಬೈಬಲ್‌ನ ಪ್ರಕಾರ ಆಧುನಿಕ ಮಾನವರ ಮೂಲಪುರುಷ ಜಲಪ್ರಳಯದಲ್ಲಿ ದೇವರ ದಯೆಯಿಂದ ಬದುಕಿ ಉಳಿದಿದ್ದ 'ನೋವಾ'. ಇವನ ವಂಶಜರು ಮೊದಲು ಒಂದೇ ಭಾಷೆಯಲ್ಲಿ ಮಾತನಾಡುತ್ತಿದ್ದರಂತೆ. ಸ್ವರ್ಗಕ್ಕೆ ಏರುವ ಬಯಕೆಯಿಂದ ಒಮ್ಮೆ ಇವರೆಲ್ಲ ಎತ್ತರದ ಒಂದು ಗೋಪುರವನ್ನು ಕಟ್ಟಲು ಆರಂಭಿಸಿದರಂತೆ. ಈ ಉದ್ಧಟತನದಿಂದ ಸಿಟ್ಟುಗೊಂಡ ದೇವರು ಅವರ ಯತ್ನವನ್ನು ವಿಫಲಗೊಳಿಸುವ ಸಲುವಾಗಿ ಅವರ ನುಡಿ ಭಿನ್ನ ಭಿನ್ನವಾಗಲಿ ಎಂದು ಶಪಿಸಿದನಂತೆ. ಕೂಡಲೇ ಅವರೆಲ್ಲ ಬೇರೆ ಬೇರೆ ಭಾಷೆಗಳಲ್ಲಿ ಮಾತನಾಡತೊಡಗಿ, ಒಬ್ಬರ ಮಾತು ಒಬ್ಬರಿಗೆ ಅರ್ಥವಾಗದೆ ಒಂದು ಹೇಳಿದರೆ ಇನ್ನೊಂದು ಮಾಡುತ್ತ ಅಲ್ಲಿ ಸಂಪೂರ್ಣ ಗೊಂದಲ ಉಂಟಾಯಿತಂತೆ. ಪರಿಣಾಮವಾಗಿ ಗೋಪುರದ ಕೆಲಸ ಅರ್ಧದಲ್ಲೇ ನಿಂತುಹೋಗಿ ನೋವಾನ ವಂಶಜರು ಬಳಿಕ ಬೇರೆ ಬೇರೆ ಕಡೆಗಳಿಗೆ ಚದುರಿಹೋದರಂತೆ.[1] "ಬೈಬಲ್ ಗೋಪುರ" ಎಂದು ಪ್ರಸಿದ್ಧವಾಗಿರುವ ಈ ಕಥೆಯ ಮೂಲಕ ವಿಭಿನ್ನ ಭಾಷೆಗಳ ಮತ್ತು ಜನಾಂಗಗಳ ಹುಟ್ಟನ್ನು ದೇವರ ಶಾಪದ ಫಲವೆಂದು ವಿವರಿಸಲು ಬೈಬಲ್ ಪ್ರಯತ್ನಿಸುತ್ತದೆ. ಆದರೆ ಪ್ರತಿಯೊಂದು ಶಾಪಕ್ಕೂ ಒಂದು ಉಶಾಪ/ಪರಿಹಾರ ಎಂಬುದು ಇರುತ್ತದೆಯಲ್ಲ ಅದುವೇ ಭಾಷಾಂತರ. ಈ ಭಾಷಾಂತರ ಮಾನವನ ಬುದ್ಧಿಶಕ್ತಿಯ ಫಲ. ಆಧುನಿಕ ಮಾನವನು ಭಾಷಾಂತರದ ಮೂಲಕ ಭಾಷೆ ಭಾಷೆಗಳ ನಡುವಿನ ಗೋಡೆಯನ್ನು ಕಡಿದುಹಾಕಿ ಎಲ್ಲಾ ಭಾಷೆಗಳನ್ನು ಒಂದುಗೂಡಿಸಿ ಜಗತ್ತನ್ನೆ ಅಂಗೈಯಲ್ಲಿ ತರುವಂತಹ ಪ್ರಕ್ರಿಯೆಯಲ್ಲಿ ತೊಡಗಿ ನೋವನ ವಂಶಜರ ಕನಸನ್ನು ನನಸು ಮಾಡಲು ಹೊರಟಿದ್ದಾನೆ.

ಭಾಷಾಂತರವು ಕುವೆಂಪುರವರು ಹೇಳಿದ 'ಓ ನನ್ನ ಚೇತನ' ಪದ್ಯದ ಹಾಗೆ ಚೇತನದಿಂದ ಅಂದರೆ ಆತ್ಮದಿಂದ, ಮನಸ್ಸಿನಿಂದ ಹುಟ್ಟಿದ 'ಭಾವನೆಗಳ ಅಭಿವ್ಯಕ್ತಿಯೇ ಭಾಷೆ' ಗಳೆರಡರ ಮಧ್ಯ ನಡೆಯುವ ಪ್ರಕ್ರಿಯೆಯೇ ಭಾಷಾಂತರ. ಅಂದರೆ ಅಮೂರ್ತರೂಪದಲ್ಲಿರುವ ಭಾವನೆಗಳನ್ನು ಭಾಷೆಯ ಮೂಲಕ ಮೂರ್ತರೂಪಕ್ಕೆ ತರುವಲ್ಲಿ ನಡೆಯುವ ಕಾರ್ಯವೇ ಭಾಷಾಂತರ. ಇದು ಭಾಷೆಗಳಾಚೆಗಿನ ಪ್ರಕ್ರಿಯೆ ಕೂಡ. ಅದು ಒಂದು ಚೇತನವಾಗಿ ಅಚೇತನವಾಗಿ ಬೆಳೆಯುತ್ತದೆ. ರೂಪರೂಪಗಳನ್ನು ದಾಟಿ,

ರೂಪಾಂತರವನ್ನು ಹೊಂದಿ, ನಾಮ ಕೋಟಿಗಳನ್ನು ಮೀಟಿ, ಭಾಷೆ ಭಾಷೆಗಳ ನಡುವಿನ ಗೋಡೆಯನ್ನು ಮೀಟಿ, ಎದೆಯ ಬಿರಿಯ ಭಾವ ದೀಟಿ, ಭಾವಾಂತರವನ್ನು ಹೊಂದಿ/ಭಾಷಾಂತರ ಹೊಂದಿ, ಭಾಷಾಂತರ ವೆನ್ನುವ ಚೇತನ ಇಂದು ಅನಿಕೇತನವಾಗಿ ಬೆಳೆಯುತ್ತಿದೆ.

ಒಂದು ಭಾಷೆಯ ಮಾತುಗಳನ್ನು ಇನ್ನೊಂದು ಭಾಷೆಗೆ ಪರಿವರ್ತಿಸುವುದೇ ಭಾಷಾಂತರ. ಭಾಷಾಂತರ ಕ್ರಿಯೆ ಕೇವಲ ಲಿಖಿತ ಕ್ಷೇತ್ರಕ್ಕೆ ಸೀಮಿತವಲ್ಲ, ಮೌಖಿಕವಾಗಿಯು ಭಾಷಾಂತರ ಕ್ರಿಯೆ ನಡೆಯಲು ಸಾಧ್ಯ. ಆದ್ದರಿಂದ Random House Distionary ಹೇಳುವ ಮಾತಿನಲ್ಲಿ ಗಮನಿಸುವುದಾದರೆ

೧. To turn something written or spoken from one language into another.

೨. The rendering of something into another language

೩. A Translation is a rendering of the same ideas in a different language from the original.

ಅಂದರೆ ಭಾಷೆಯ ಮಾಧ್ಯಮ ಬೇರೆಯೇ ಆದರೂ, ಅದೇ ಭಾವನೆಗಳು ಕಂಡರಣೆಗೊಂಡಲ್ಲಿ ಅದು ಭಾಷಾಂತರವೆಂಬ ಹೆಸರಿಗೆ ಅರ್ಹವಾಗುತ್ತದೆ ಎಂದಂತಾಯಿತು. ಅಂದರೆ ಮೂಲದ ಭಾವನೆಗಳು ಯಥಾವತ್ತಾಗಿ ಮತ್ತೊಂದು ಮಾಧ್ಯಮದಲ್ಲಿ ಮೈದಳೆಯದಿದ್ದರೆ ಅದು ಭಾಷಾಂತರವಾಗುವುದಿಲ್ಲ ಎಂಬುದನ್ನು ನಿಷೇಧ ರೂಪವಾಗಿ ಹೇಳಿದಂತಾಯಿತು. ಅಂದರೆ ಭಾಷಾಂತರದ ಯಶಸ್ಸು ಮೂಲದ ಭಾವಗಳನ್ನು ಅದು ಎಷ್ಟರಮಟ್ಟಿಗೆ ಬಿಂಬಿಸಿದೆ ಎಂಬುದನ್ನು ಅವಲಂಬಿಸಿರುತ್ತದೆ.[೨]

'Jokabson' ಹೇಳುವಂತೆ "translation in semiotic terms as an interpretation of verbal signs by means of some other language understanding the translation process as a substitution of messages in one language not for separate code-unite but for entire messages in some other language."

'Lawendowski' ಹೇಳುವಂತೆ ಭಾಷಾಂತರ ಎಂದರೆ " The transfer of 'meaning' from one set of language signs to another set of language signs"[೩]

ಒಂದು ಭಾಷೆಯ ಸಂಕೇತಾರ್ಥಗಳನ್ನು ಇನ್ನೊಂದು ಭಾಷೆಯ ಸಂಕೇತಾರ್ಥಗಳನ್ನಾಗಿ ಪರಿವರ್ತಿಸುವುದೇ ಭಾಷಾಂತರ" ಈ ವ್ಯಾಖ್ಯಾನಗಳನ್ನು ಗಮನಿಸಿದರೆ ಭಾಷಾಂತರ ಭಾಷೆಯಷ್ಟೆ ಹಳೆಯದು ಎಂದು ತಿಳಿಯುತ್ತದೆ. ಅತ್ಯಂತ ಪ್ರಾಚೀನ ಕಾಲದಲ್ಲಿ ಕೂಡ ವಿಭಿನ್ನ ಭಾಷೆಗಳನ್ನಾಡುತ್ತಿದ್ದ ಜನರ ಅಥವಾ ಜನಾಂಗಗಳ ನಡುವೆ ಪರಸ್ಪರ ಸಂಪರ್ಕ, ವಿಚಾರಗಳ ವಿನಿಮಯ ಮತ್ತು ವಾಣಿಜ್ಯ ವ್ಯವಹಾರಗಳು ನಡೆಯುತ್ತಿದ್ದವು. (ಉದಾ : ಪರ್ಶಿಯಾ, ಇಂಗ್ಲೆಂಡ್, ರೋಮನ್, ಈಜಿಪ್ಟ್, ಶ್ರೀಲಂಕಾ, ಜರ್ಮನಿ, ಜಪಾನ್ , ಚೀನಾ, ಮೊದಲಾದ ದೇಶಗಳೊಡನೆ ಕನ್ನಡಿಗರು ಸಂಪರ್ಕವೇರ್ಪಡಿಸಿ.

ವ್ಯವಹಾರ ನಡೆಸುತ್ತಿದ್ದರು ಎಂಬುದು ಇತಿಹಾಸದಿಂದ ತಿಳಿದುಬರುತ್ತದೆ. ಅಷ್ಟೇ ಅಲ್ಲದೆ ನೆರೆಹೊರೆಯ ರಾಜ್ಯಗಳ ರಾಜರೊಡನೆಯೂ ಸಂಬಂಧ ಹೊಂದಿರುವುದನ್ನು ಚರಿತ್ರೆಯಲ್ಲಿ ಕಾಣಬಹುದು. ಭಾಷಾಂತರ ವಿಲ್ಲದೆ ಇದು ಸಾಧ್ಯವಾಗುತ್ತಿರಲಿಲ್ಲ. ಮೊದಮೊದಲು ಇಂಥ ಭಾಷಾಂತರಗಳು ಕೇವಲ ವಾಚಕವಾಗಿದ್ದವು, ಸಾಂಕೇತಿಕವಾಗಿದ್ದವು. ಮುಂದೆ ಮುಂದೆ ಲಿಪಿಗಳ ಉದಯದೊಂದಿಗೆ ಲಿಖಿತ ಭಾಷಾಂತರಗಳೂ ಪ್ರಾರಂಭವಾದವು. ಪ್ರಾರಂಭದಲ್ಲಿ ಅಷ್ಟೇನು ಮಾನ್ಯತೆ ಪಡೆಯದ ಈ ವಿಚಾರ ಮುಂದೆ ವ್ಯಾಪಕವಾಗಿ ಬೆಳೆದು ಬಂದಿತು.

ಕುರ್ತಕೋಟಿಯವರು ''ಭಾಷಾಂತರವೆಂದರೆ ಮುಖ್ಯವಾಗಿ ಒಂದು ಸಂಸ್ಕೃತಿ ವಿನಿಮಯ. ಒಂದು ಭಾಷೆಯ ಅರ್ಥಸಂಚಯವನ್ನು ಇನ್ನೊಂದು ಭಾಷೆಗೆ ಒಯ್ಯುವಾಗ ಅನೇಕ ವಿಸ್ಮಯಕಾರಿಯಾದ ಬದಲಾವಣೆಗಳಾಗುತ್ತವೆ. ಅಂದರೆ ಬದಲಾವಣೆ ಈ ವ್ಯಾಪಾರದಲ್ಲಿ ಅನಿವಾರ್ಯವಾಗುತ್ತದೆ. ಅಲ್ಲದೆ ಭಾಷಾಂತರದ ವ್ಯಾಪಾರ ಕೇವಲ ಶಾಬ್ದಿಕ ಭಾಷೆಗಳಿಗಷ್ಟೇ ಸೀಮಿತವಾಗಿರುವುದಿಲ್ಲ. ಶಾಬ್ದಿಕ ಭಾಷೆಯಂತೆ ಬೇರೆ ಬಗೆಯ ಭಾಷೆಗಳನ್ನೂ ನಾವು ನಿರ್ಮಿಸಿಕೊಂಡಿರುತ್ತೇವೆ. ನಮ್ಮ ವಾಸ್ತುಶಿಲ್ಪ, ಪುರಾಣಕತೆಗಳು, ಮನರಂಜನೆಯ ಸಾಧನೆಗಳಾದ ಸಂಗೀತ, ನಾಟಕ ಮತ್ತು ನೃತ್ಯ ಪ್ರಕಾರಗಳು ಮೊದಲಾದವು ಕೂಡ ವಿವಿಧವಾದ ಭಾಷೆಗಳೇ ಆಗಿವೆ. ಈ ಭಾಷೆಗಳಲ್ಲಿ ಕೂಡಾ ಭಾಷಾಂತರ ಕಾರ್ಯ ನಡೆದೇ ಇರುತ್ತದೆ. ಒಂದು ಮನೆತನದ ಹೆಣ್ಣನ್ನು ಇನ್ನೊಂದು ಮನೆತನಕ್ಕೆ ಮದುವೆ ಮಾಡಿಕೊಡುವುದು, ಆಸ್ತಿಯ ಕ್ರಯ ವಿಕ್ರಯ, ಮತಾಂತರ ಹೊಂದುವುದು, ದೇಶಾಂತರದಲ್ಲಿ ಹೋಗಿ ನೆಲೆಸುವುದು ಮೊದಲಾದ ಸಂಗತಿಗಳೆಲ್ಲ ಭಾಷಾಂತರ ಕ್ರಿಯೆಗಳೇ ಆಗಿವೆ. ಭಾಷಾಂತರವೆಂದರೆ, ಎರಡು ಭಾಷೆಗಳ ನಡುವೆ ನಡೆಯುವ ವ್ಯವಹಾರ''[೪] ಎಂದು ವ್ಯಾಖ್ಯಾನಿಸುವ ಮೂಲಕ ಭಾಷಾಂತರ ಭಾಷೆಗಳಾಚೆಗಿನ ಪ್ರಕ್ರಿಯೆ ಕೂಡ ಎಂದು ತಿಳಿಸಿಕೊಟ್ಟಿದ್ದಾರೆ. ಇಂತಹ ಭಾಷಾಂತರ ಕಲೆಯ ಬೆಳವಣಿಗೆಯನ್ನು ನಾವು ಮೂರು ಭಾಗಗಳಾಗಿ ವಿಂಗಡಿಸಿ ನೋಡಬಹುದು.

೧. ಪಾಶ್ಚಾತ್ಯರಲ್ಲಿ ಭಾಷಾಂತರದ ಬೆಳವಣಿಗೆ

೨. ಭಾರತೀಯರಲ್ಲಿ ಭಾಷಾಂತರದ ಬೆಳವಣಿಗೆ

೩. ಕರ್ನಾಟಕದಲ್ಲಿ ಭಾಷಾಂತರದ ಬೆಳವಣಿಗೆ

## ಪಾಶ್ಚಾತ್ಯರಲ್ಲಿ ಭಾಷಾಂತರದ ಬೆಳವಣಿಗೆ

ಪಾಶ್ಚಾತ್ಯ ಜ್ಞಾನಗಳ ಕೇಂದ್ರ ಗ್ರೀಕ್ ಆಗಿದ್ದು, ಬಹುಶಃ ಪಾಶ್ಚಾತ್ಯ ಇತಿಹಾಸವು ಗ್ರೀಕ್‌ನಿಂದಲೇ ಆರಂಭವಾಗುತ್ತದೆ. ಅಂತರಾಷ್ಟ್ರೀಯ ಮಟ್ಟದಲ್ಲಿನ ಸಾಹಿತ್ಯ, ಕಲೆ, ದರ್ಶನ, ಇತಿಹಾಸ, ಮಾನವಿಕ ಸಮಾಜ ವಿಜ್ಞಾನದಂತೆ, ವಿಷಯಗಳ ಪ್ರಗತಿಯನ್ನು ಅರಿಯಲು ಕೆಲ ಬುದ್ಧಿವಂತರನ್ನು ಪ್ರೇರಣೆ ಮತ್ತು ಪ್ರೋತ್ಸಾಹ ನೀಡಿ ಜ್ಞಾನ ಶಿಸ್ತುಗಳ ಬೆಳವಣಿಗೆಯ ಜೊತೆಗೆ ಭಾಷಾಂತರ ಕಲೆಯ ಬೆಳವಣಿಗೆಗೆ ಗ್ರೀಕರು

ಕಾರಣರಾದರು. ಅಲ್ಲದೆ ಚೀನ, ಜರ್ಮನ್, ಜಪಾನ್ ಮುಂತಾದ ರಾಷ್ಟ್ರಗಳಲ್ಲಿಯೂ ಭಾಷಾಂತರ ಬೆಳೆಯುತ್ತಿತ್ತು. ಕಾಲಾಂತರದಲ್ಲಿ ಗ್ರೀಕರು ಮತ್ತು ರೋಮನ್ನರ ಮಧ್ಯೆ ಯುದ್ಧ ನಡೆದು ಈ ಯುದ್ಧದಲ್ಲಿ ಗ್ರೀಕರು ಸೋತರು. ಆಗ ಗ್ರೀಕ್ ಸಂಸ್ಕೃತಿಯ ಸಾಹಿತ್ಯಕ್ಕೆ ಮನಸೋತು ಅದೆಲ್ಲವನ್ನು ರೋಮನ್ನರು ಕೊಳ್ಳೆ ಹೊಡೆದು ಅಲ್ಲಿನ ಕೆಲ ವಿದ್ವಾಂಸರನ್ನು ತಮ್ಮೊಂದಿಗೆ ಹೊರಡುವಂತೆ ಮಾಡಿ, ಗ್ರೀಕ್ ಸಾಹಿತ್ಯವೆಲ್ಲ ಲ್ಯಾಟಿನ್ ಭಾಷೆಗೆ ಭಾಷಾಂತರಗೊಳ್ಳುವಂತೆ ಮಾಡಿದರು. "ಗ್ರೀಕ್ ರೋಮನ್ನರ ಸಾಂಸ್ಕೃತಿಕ ಸಮನ್ವಯದಿಂದಾಗಿ, ಪಾಶ್ಚಾತ್ಯರಲ್ಲಿ ಭಾಷಾಂತರವು ಹೊಸಬೆಳಕು ಕಂಡಿತು." ಹೀಗೆ ಗ್ರೀಕ್‌ನಿಂದ ಲ್ಯಾಟಿನ್, ಲ್ಯಾಟಿನ್ ನಿಂದ ಇಟಲಿಯನ್, ಯುರೋಪಿಯನ್ ಹಾಗೂ ಇತರ ಭಾಷೆಗಳಿಗೆ ಸಾಹಿತ್ಯ ಎಂಬುದು ಭಾಷಾಂತರಗೊಳ್ಳುತ್ತಾ ಭಾಷಾಂತರದ ಹರವು ವಿಸ್ತಾರಗೊಳ್ಳುತ್ತ, ಬೆಳೆಯುತ್ತ ಬಂದಿತು.

ಕ್ರಿ.ಪೂ.೩ನೇ ಶತಮಾನದಲ್ಲಿ ಮೊಟ್ಟ ಮೊದಲಿಗೆ ಯುರೋಪಿನಲ್ಲಿ ಭಾಷಾಂತರ ಮಾಡಿದವನು (ಈಗ ನಮಗೆ ತಿಳಿದಿರುವಂತೆ) ಗ್ರೀಕ್‌ನ 'ಲೀವೀಸ್ ಆ್ಯಂಡ್ರೊ ನಿಖಿಸ್'. ಈತ ಒಡಿಸ್ಸಿ ಎಂಬ ಕೃತಿಯನ್ನು ಲ್ಯಾಟಿನ್‌ಗೆ ಭಾಷಾಂತರಿಸಿದನು. ಮುಂದೆ ಇದೇ ಕೃತಿಯನ್ನು ಹಲವಾರು ವಿದ್ವಾಂಸರು ಆಕರವಾಗಿ ಬಳಸಿಕೊಂಡಿದ್ದು ಗಮನಾರ್ಹ. ಈತನ ತರುವಾಯ ನೇವಿಯಸ್ ಮತ್ತು ವಿನ್ನಿಯಸ್ ಎಂಬ ಲ್ಯಾಟಿನ್ ವಿದ್ವಾಂಸರು ಗ್ರೀಕ್‌ನ ಪ್ರಸಿದ್ಧ ನಾಟಕಗಳನ್ನು ಲ್ಯಾಟಿನ್ ಭಾಷೆಗೆ ಭಾಷಾಂತರಿಸಿದರು. "ಗಿಲ್ಗಮೇಶನ ಮಹಾಕಾವ್ಯ" ಸುಮೇರಿಯನ್ ಭಾಷೆಯ ಈ ಕೃತಿ ಕ್ರಿಸ್ತ ಪೂರ್ವ ೧೫೦೦ರ ಸುಮಾರಿಗೆ ಅಕ್ಕಡಿ ಭಾಷೆಗೆ ಅನುವಾದಿತವಾಗಿತ್ತು. ಭಾಷಾಂತರ ಕಲೆಗೆ ಎಷ್ಟು ದೀರ್ಘ ಇತಿಹಾಸವಿದೆ ಎಂಬುದನ್ನು ಇದರಿಂದ ನಾವು ತಿಳಿಯಬಹುದು.

ಆನಂತರ ಭಾಷೆಗಳು ವೃದ್ಧಿಯಾದಂತೆ ಭಾಷಾಂತರಗಳೂ ಬೆಳೆಯತೊಡಗಿದವು. ಕ್ರಿಸ್ತಶಕ ಮೂರನೇ ಶತಮಾನದಲ್ಲಿ ಈಜಿಪ್ಟ್ ಮತ್ತು ಗ್ರೀಸ್ ಗಳಲ್ಲಿ ನೆಲೆಸಿದ್ದ ಯಹೂದ್ಯರು ತಮ್ಮ ಪವಿತ್ರ ಗ್ರಂಥಗಳನ್ನು 'ಸೆಪ್ತೊ ಆಗಿಂತ' ಎಂಬ ಹೆಸರಿನಲ್ಲಿ ಗ್ರೀಕ್ ಭಾಷೆಗೆ ಪರಿವರ್ತಿಸಿದರು. 'ಐದನೇ ಶತಮಾನದಲ್ಲಿ ಸ್ಟೆಂಟ್ ಜೆರೋಮ್ ಎಂಬಾತ ಬೈಬಲನ್ನು ಗ್ರೀಕ್ ಭಾಷೆಯಿಂದ ಲ್ಯಾಟಿನ್ ಭಾಷೆಗೆ ಅನುವಾದಿಸಿದ. ೯-೧೦ನೇ ಶತಮಾನಗಳಲ್ಲಿ ಅರಬರು ಗ್ರೀಕ್ ಮತ್ತು ಸಂಸ್ಕೃತ ಭಾಷೆಗಳಲ್ಲಿನ ನೂರಾರು ವೈಜ್ಞಾನಿಕ ಹಾಗೂ ಮಾನವಿಕ ಕೃತಿಗಳನ್ನು ಅರಬ್ಬಿ ಭಾಷೆಗೆ ಭಾಷಾಂತರಿಸಿ, ಈ ಎರಡೂ ಭಾಷೆಗಳಲ್ಲಿದ್ದ ಜ್ಞಾನ ಭಂಡಾರವನ್ನು ಅರಗಿಸಿಕೊಂಡರು.

ಕೆಲವು ಶತಮಾನಗಳು ಕಳೆದಂತೆ ಅಂತರಾಷ್ಟ್ರೀಯ ಮಟ್ಟದಲ್ಲಿ ಭಾಷಾಂತರಕಾರರ ಒಂದು ತಂಡವೆ ಸಿದ್ಧಗೊಂಡಿತು. ಇದರ ಮೂಲಕ ಯುರೋಪಿನ ಸಾಹಿತ್ಯ ಕಲೆ, ವಿಜ್ಞಾನದಲ್ಲಿ ಗಮನಾರ್ಹವಾದ ಪ್ರಗತಿ ಕಂಡಿದ್ದರಿಂದ ಅದಕ್ಕೊಂದು ಐತಿಹಾಸಿಕ ಮಹತ್ವ ಪ್ರಾಪ್ತವಾಯಿತು. ಯುರೋಪಿನ ತರುವಾಯ ಅರಬ್ಬರು, ಏಷ್ಯಾ, ಆಫ್ರಿಕ ಮತ್ತು ಯುರೋಪಿನ ಕೆಲವು ಪ್ರದೇಶಗಳ ಮೇಲೆ ದಾಳಿ ನಡೆಸಿ ಅಲ್ಲಿನ

ಗ್ರಂಥ ರಾಶಿಯನ್ನೆಲ್ಲ ವಶಪಡಿಸಿಕೊಂಡು ಕೆಲವಿದ್ವಾಂಸರನ್ನು ಬಾಗ್ದಾದಿಗೆ ಬರಮಾಡಿಕೊಂಡರು. ಮುಂದೆ 'ಕಲೀಫ್ ಆಲ್ ಮಸ್ಸುರ್' ಎಂಬುವವನ ಕಾಲದಲ್ಲಿ ಬಾಗ್ದಾದಿನಲ್ಲಿ ಸಂಶೋಧನೆ ಮತ್ತು ಭಾಷಾಂತರದ ಕೇಂದ್ರವನ್ನು ತೆರೆಯಲಾಯಿತು. ಇಲ್ಲಿ ಬೇರೆ ಬೇರೆ ಭಾಷೆಯ ಪ್ರಸಿದ್ಧ ಗ್ರಂಥಗಳನ್ನು ಅರಬ್ಬಿ ಭಾಷೆಗೆ ಭಾಷಾಂತರಿಸಲಾಯಿತು. ಆ ಕಾಲದಲ್ಲಿ ಬಾಗ್ದಾದ ನಗರ ಜಗತ್ತಿನ ಅತಿದೊಡ್ಡ ಭಾಷಾಂತರ ಕೇಂದ್ರವಾಗಿತ್ತು.[೨]

೧೩ನೇ ಶತಮಾನದಲ್ಲಿ ಭಾಷಾಂತರ ಅತ್ಯುನ್ನತ ಸ್ಥಾನಕ್ಕೆ ಏರಿತು. ಚರ್ಚಿನ ಪಾದ್ರಿಗಳು 'ಧಾರ್ಮಿಕ ಕೃತಿಗಳನ್ನು ಮತ್ತು ಬೈಬಲ್‌ನ್ನು ಜಗತ್ತಿನ ಬೇರೆ ಬೇರೆ ಭಾಷೆಗಳಿಗೆ ಭಾಷಾಂತರಿಸುವ ಮೂಲಕ ಧಾರ್ಮಿಕ ಕ್ರಾಂತಿಗೆ ಈ ಭಾಷಾಂತರವು ಅನುವುಮಾಡಿಕೊಟ್ಟಿತು. ಹಿಂದಿನ ೧೬ನೇ ಶತಮಾನದಲ್ಲಿ ಪ್ಲೂಟಾರ್ಕನ 'Lives of famous Romans' "ಜಾಕಸ್ ಅಮ್‌ಯಾಟ್ ಇನ್ನೊಂದು ಭಾಷೆಗೆ ಭಾಷಾಂತರಿಸಿದನು. ಈ ಕೃತಿ ಶೇಕ್ಸಪಿಯರ್‌ನಿಗೆ ಗಂಭೀರವಾದ ನಾಟಕಗಳ ರಚನೆಗೆ ಹಚ್ಚಿತು. 'ಇಂಗ್ಲೆಂಡಿನ ಎಲಿಜಿಬೆತ್' ರಾಣಿಯ ಕಾಲವು ಭಾಷಾಂತರದ ಯುಗವೇ ಸರಿ. ಜ್ಯೂಲಿಯಸ್ ಸೀಜರ್ ಟೆಂಪೆಸ್ಟ್ , ಕ್ಲಿಯೋಪಾತ್ರಗಳಂತ ನಾಟಕಗಳು ಈ ಕಾಲದಲ್ಲಿ ಮೂಲ ಭಾಷೆಯಿಂದ ಇನ್ನೊಂದು ಭಾಷೆಗೆ ಭಾಷಾಂತರಗೊಂಡವು. ೧೮ನೇ ಶತಮಾನದಲ್ಲಿ ಅಲೆಕ್ಸಂಡರ್ ಪೂಪ್ , ವಿಲಿಯಂ ಕೌಬರ್ಟ್, ಶ್ಲೆಗಲ್, ಪೊಪಜಾನ್ಸ್‌ನ್‌ರಂತವರು ಮೊಟ್ಟ ಮೊದಲಬಾರಿಗೆ ಕಾವ್ಯಗಳ ಅನುವಾದಕ್ಕೆ ತೊಡಗಿದರು. ಇದೇ ಶತಮಾನದ ಕೊನೆಯ ದಶಕದಲ್ಲಿ ಭಾಷಾಂತರ ಕಲೆಯನ್ನು ಕುರಿತು "Essay on the principales of the Translation" ಎಂಬ ಸಂಶೋಧನಾತ್ಮಕ ಕೃತಿಯೊಂದನ್ನು ಲಾರ್ಡ್‌ವುಡ್ ಹೌಸ್ಲಿ ಎಂಬುವವನು ಹೊರತಂದನು. "ಇದು ಭಾಷಾಂತರಕಾರರಿಗೆ ಒಂದು ಕೈಪಿಡಿಯಾಗಿ ಪರಿಣಮಿಸಿತು." ೧೯ನೇ ಶತಮಾನದ ವೇಳೆಗೆ ಕಾರ್ಲೆಲ್, ಗಯಟೆ, ಶೆಲ್ಲಿ, ಬೈರನ್, ಲಾಂಗ್‌ಫೆಲೊ ಪ್ರಮುಖರ ಕಾವ್ಯವನ್ನು ಭಾಷಾಂತರಿಸಲು ಅಣಿಯಾದರು. ಇದು ೨೦ನೇ ಶತಮಾನದವರೆಗೂ ಹಾಗೆ ಬೆಳೆದುಬಂದು ಇಂದು ಹವ್ಯಾಸಕ್ಕಾಗಿ ಕೀರ್ತಿಗಾಗಿ, ಹಣಗಳಿಕೆಗಾಗಿ ಮಾಡುವ ಸಾಧನವಾಗಿ ಭಾಷಾಂತರ ಬೆಳೆದುನಿಂತಿದೆ. ಹೀಗೆ ಪಶ್ಚಿಮದಲ್ಲಿ ಭಾಷಾಂತರವು ಬೆಳೆದು ಬಂದಿತು.

ಪಾಶ್ಚಾತ್ಯರಲ್ಲಿ ಹುಟ್ಟಿ ಬೆಳೆದ ಭಾಷಾಂತರ ಕಾರ್ಯ ಇಂದು ಬಹಳ ದೊಡ್ಡ ಪ್ರಮಾಣವನ್ನು ತಳೆದು ಈಗ ಜಗತ್ತಿನ ಉದ್ದಗಲಕ್ಕೂ ಹರಡಿದೆ. ಇಂದು ಪ್ರಪಂಚದ ಬಹುತೇಕ ಎಲ್ಲ ಲಿಖಿತ ಭಾಷೆಗಳಲ್ಲೂ ಭಾಷಾಂತರಕ್ಕೆ ಒಂದು ಪ್ರಮುಖ ಸ್ಥಾನವಿದೆ. ಪ್ರತಿಯೊಂದು ಭಾಷೆಯಲ್ಲೂ ಇತರ ಭಾಷೆಗಳ ಶ್ರೇಷ್ಠ ಕೃತಿಗಳನ್ನು ಭಾಷಾಂತರಿಸುವ ಕೆಲಸ ಅವ್ಯಾಹತವಾಗಿ ನಡೆಯುತ್ತಿದೆ. 'ಬ್ರಿಟಾನಿಕಾ ವಿಶ್ವಕೋಶವನ್ನು'(Encyclopaedia Britannica) ಕೈರೋದಲ್ಲಿ ಈಗ ಅರಬಿ ಭಾಷೆಗೆ ಭಾಷಾಂತರಿಸಲಾಗುತ್ತಿದೆ. ಬಹು ಹಿಂದೆಯೇ ಪ್ರಾರಂಭವಾದ ಭಾಷಾಂತರ ಯೋಜನೆಯೊಂದು ರಷ್ಯನ್ ಭಾಷೆಗೆ ಹಿಂದೆ ಅನುವಾದಿತವಾಗಿರದಿದ್ದ ವಿಶ್ವದ ಗಣನೀಯ ಸಾಹಿತ್ಯ ಕೃತಿಗಳ ಭಾಷಾಂತರಿಸಿ ೨೪೫ ಸಂಪುಟಗಳಲ್ಲಿ ತರುವುದರೊಂದಿಗೆ ಈ ಯೋಜನೆ ರಷ್ಯನ್ ಓದುಗರಿಗೆ ಈಗ ಒದಗಿಸಿದೆ. ಹೀಗೆ

ರಷ್ಯನ್, ಇಂಗ್ಲಿಷ್, ಫ್ರೆಂಚ್, ಜರ್ಮನ್ ಮೊದಲಾದ ಮುಂದುವರಿದ ಭಾಷೆಗಳಲ್ಲಿ ಇಂದು ವಿಪುಲವಾದ ಭಾಷಾಂತರ ಸಾಹಿತ್ಯ ಶೇಖರವಾಗಿದೆ. ಇಂಗ್ಲಿಷ್ ಭಾಷೆಯಲ್ಲಿರುವ ಭಾಷಾಂತರ ಕೃತಿಗಳಿಗಂತೂ ಲೆಕ್ಕವಿಲ್ಲ. ನಿಮಗೆ ವೇದೋಪನಿಷತ್ತುಗಳು, ಮನುಸ್ಮೃತಿ ಅಥವಾ ಕಾಳಿದಾಸನ ನಾಟಕಗಳು ಬೇಕೆ? ಅದರಲ್ಲಿವೆ, ಕನ್‌ಫ್ಯೂಶಿಯಸ್ ಅಥವಾ ಲಾವೊತ್ಸೆಯವರ ಕೃತಿಗಳು ಬೇಕೆ? ಅದರಲ್ಲಿವೆ, ಆಫ್ರಿಕಾ ಖಂಡದ ನವೋದಿತ ಲೇಖಕರ ಬರಹಗಳು ಬೇಕೆ? ಇಂಡೋನೇಷ್ಯ, ವಿಯಟ್ನಾಮ್, ಜಪಾನ್, ಜರ್ಮನಿ ಅಥವಾ ಮಂಗೋಲಿಯಗಳ ಕಥೆ, ಕಾದಂಬರಿಗಳು ಬೇಕೆ? ಅದರಲ್ಲಿವೆ ಇನ್ನು ಗ್ರೀಕ್, ಲ್ಯಾಟಿನ್ ಮತ್ತು ಆಧುನಿಕ ಐರೋಪ್ಯ ಭಾಷೆಗಳಲ್ಲಿರುವ ಬಹುತೇಕ ಎಲ್ಲ ವೈಜ್ಞಾನಿಕ ಹಾಗೂ ಮಾನವಿಕ ಕೃತಿಗಳು ಅದರಲ್ಲಿ ದೊರೆಯುತ್ತವೆ. ಇಂಗ್ಲಿಷ್ ಭಾಷೆಯಲ್ಲಿ ಯಾವುದರ ಅನುವಾದ ಇದೆ ಎನ್ನುವುದಕ್ಕಿಂತ ಯಾವುದು ಇಲ್ಲ ಎನ್ನುವುದು ಹೆಚ್ಚು ಸುಲಭ. ಇಂಗ್ಲಿಷ್ ಭಾಷೆಯ ಸತ್ವ, ಶಬ್ದಸಂಪತ್ತು ಮತ್ತು ಪ್ರಭಾವಗಳಿಗೆ ಬಹುಶಃ ಭಾಷಾಂತರವೇ ಒಂದು ಮುಖ್ಯ ಕಾರಣ. ಭಾರತೀಯರು, ಕನ್ನಡಿಗರು ಇಂಗ್ಲಿಷ್ ಪ್ರಭಾವಕ್ಕೆ ಒಳಗಾಗಲು ಅಲ್ಲಿನ ಜ್ಞಾನ ಸಂಪತ್ತೆ ಬಹುತೇಕ ಕಾರಣವೆಂಬುದು ನನ್ನ ಅಭಿಪ್ರಾಯ.[೬]

**ಭಾರತದಲ್ಲಿ ಭಾಷಾಂತರದ ಬೆಳವಣಿಗೆ**

ಈ ಹಿಂದೆ ಪಾಶ್ಚಾತ್ಯರಲ್ಲಿ ಭಾಷಾಂತರ ಹೇಗೆ ಹುಟ್ಟಿ ಬೆಳೆದು ಬಂದಿದೆ ಎಂಬುದನ್ನು ಗುರುತಿಸಲಾಯಿತು. ಅದೇ ತೆರನಾಗಿ ಭಾರತದಲ್ಲಿ ಭಾಷಾಂತರ ಹೇಗೆ ಹುಟ್ಟಿ ಬೆಳೆದುಬಂದಿದೆ ಎಂಬುದನ್ನು ಇಲ್ಲಿ ಗುರುತಿಸಬಹುದಾಗಿದೆ. ಭಾರತದ ಪ್ರಾಚೀನ ಭಾಷೆಗಳಾದ ಸಂಸ್ಕೃತ, ಪಾಲಿ ಮತ್ತು ಪ್ರಾಕೃತಗಳಲ್ಲಿ ಅಪಾರವಾದ ಸಾಹಿತ್ಯ ರಾಶಿಯೆ ದೊರೆಯುತ್ತದೆ. ಈ ಪ್ರಾಚೀನ ಸಾಹಿತ್ಯಗಳಲ್ಲಿ ಸಂಸ್ಕೃತ ಸಾಹಿತ್ಯವು ಇಂದಿನವರೆಗೂ ನಿರಂತರವಾಗಿ ಬೆಳೆದುಬಂದಿದೆ. ಮತ್ತು ಕೃಷಿಗೊಂಡಿದೆಯೆಂಬುದನ್ನು ನೋಡಿದ್ದೇವೆ. ಹಾಗೆ ಇತರ ಭಾಷೆಗಳು ಬೆಳೆದುಬಂದಿದ್ದು ಭಾರತದ ಎಲ್ಲಾ ಭಾಷೆಗಳು ಜನಪ್ರಿಯವಾಗಲು ಮತ್ತು ಸಮೃದ್ಧವಾಗಿ ಬೆಳೆಯಲು ಕಾರಣ ಭಾಷಾಂತರ. ಭಾರತದಲ್ಲಿ ಭಾಷಾಂತರ ಹೇಗೆ ಬೆಳೆದು ಬಂದಿದೆ ಎಂಬ ಸಂಗತಿಯನ್ನು ಸ್ವಲ್ಪದರಲ್ಲಾದರೂ ಸೂಚಿಸದಿದ್ದರೆ ಭಾರತೀಯ ಸಾಹಿತ್ಯದಲ್ಲಿ ಭಾಷಾಂತರದ ಇತಿಹಾಸವು ಅಪೂರ್ಣವಾಗಿಯೇ ಉಳಿದೀತು. ಭಾರತದಲ್ಲಿನ ಭಾಷಾಂತರದ ಬೆಳವಣಿಗೆಯನ್ನು ಸಮಗ್ರವಾಗಿ ತಿಳಿಸಲು ಸಾಧ್ಯವಾಗದಿದ್ದರೂ ಸಂಕ್ಷಿಪ್ತವಾಗಿ ತಿಳಿಸಲಾಗಿದೆ. ಭಾರತದಲ್ಲಿನ ಭಾಷಾಂತರದ ಬೆಳವಣಿಗೆ ಕುರಿತ ಅಧ್ಯಯನ ಸಮಗ್ರವಾಗಿ ನಡೆಯದೆ ಇರುವುದರಿಂದ ಈ ಕುರಿತೆ ಒಂದು ಮಹಾಪ್ರಬಂಧವನ್ನು ರಚಿಸುವ ಸಾಧ್ಯತೆ ಇದೆ.

ಈ ಹಿಂದಿನ ಬೈಬಲ್‌ನ ಗೋಪುರ ಕತೆಯಲ್ಲಿ ತಿಳಿದಂತೆ ಚದುರಿ ಹೋದ ಬೇರೆ ಬೇರೆ ಭಾಷೆಗಳನ್ನಾಡುವ ಜನರು ಒಂದೆಡೆ ಸೇರಿದಾಗ ಭಾಷಾಂತರ ಪ್ರಾರಂಭವಾಯಿತೆನ್ನಬಹುದು. ನಂತರ ವ್ಯಾಪಾರ ಮತ್ತು ಯುದ್ಧಗಳು ಅಂತಹ ಪರಿಸ್ಥಿತಿಗೆ ಕಾರಣವಾಗಿರಬಹುದು. ಆಳರಸರ ಭಾಷೆ

ಬೇರೆಯಾದಾಗ ಅವರ ಭಾಷೆ ಕಲಿಯಲು ಭಾಷಾಂತರ ಪ್ರಾರಂಭವಾಗಿರುವುದೂ ಉಂಟು. ಉನ್ನತ ಸಂಸ್ಕೃತಿಯ ಭಾಷೆಯ ಸಂಪರ್ಕವುಂಟಾದಾಗಲೂ, ಭಾಷಾಂತರ ಅಪೇಕ್ಷಣೀಯವೆನಿಸುತ್ತದೆ. ಪರದೇಶಗಳನ್ನು ನೋಡುವ ಕುತೂಹಲದಿಂದ ಪ್ರಚೋದಿತರಾದ ಪ್ರವಾಸಿಗಳ ಸಾಹಸಮಯ ಜೀವನವೂ ಇದಕ್ಕೆ ಸ್ವಲ್ಪ ಮಟ್ಟಿಗೆ ಕಾರಣವಾಗಿರದ್ದಿರಬಹುದು. ಮತಬೋಧಕರು ಎಲ್ಲಿಗೆ ತಮ್ಮ ಮತವನ್ನು ಕೊಂಡೊಯುತ್ತಿದ್ದರೋ ಅಲ್ಲಿನ ಭಾಷೆಯಲ್ಲೇ ಬೋಧನೆ ಮಾಡಬೇಕಾಗುತ್ತಿತ್ತು. ಹಾಗೆಯೇ ಒಂದು ಮತಾನುಯಾಯಿಗಳು ತಮ್ಮ ಮತದ ವಿಷಯವಾಗಿ ಹೆಚ್ಚು ತಿಳಿಯಲೋಸುಗ ಮತಸ್ಥಾಪಕರು ಬೋಧಿಸಿದ ಭಾಷೆ ತಿಳಿಯಲು ಪ್ರಯತ್ನಪಡುತ್ತಾರೆ. ಹೀಗಾಗಿ ಭಾಷಾಂತರ ಅಸ್ತಿತ್ವಕ್ಕೆ ಬಂದಿರಬೇಕು.

ಮೆಹೆಂಜದಾರೊ-ಹರಪ್ಪ ಸಂಸ್ಕೃತಿಗಳ ಕಾಲದ ಭಾರತೀಯರು ಪುರಾತನ ಈಜಿಪ್ಟ್ ಸುಮೇರಿಯಗಳೊಡನೆ ವ್ಯಾಪಾರ ಸಂಪರ್ಕ ಹೊಂದಿದ್ದರೆಂದು ತಿಳಿದುಬಂದಿದೆ. ಇತಿಹಾಸದ ಪ್ರಕಾರ ಆಗ ಭಾಷಾಂತರವಿತ್ತು. ವೇದಗಳ ಕಾಲದಲ್ಲಿ ಬೇರೆ ಬೇರೆ ಭಾಷೆಗಳನ್ನಾಡುವ ಜನರಿದ್ದರೆಂಬ ಉಲ್ಲೇಖವಿದೆ. ವೇದಗಳಲ್ಲಿ ಅನೇಕ ಅವೈದಿಕಾಂಶಗಳಿವೆಯೆಂದು ವಿದ್ವಾಂಸರು ಅಭಿಪ್ರಾಯಪಡುತ್ತಾರೆ. ಇದು ಭಾಷಾಂತರವಿತ್ತೆಂದು ಊಹಿಸಲು ಆಧಾರ. ಹೀಗೆ ಭಾಷಾಂತರ ಬಹಳ ಹಿಂದಿನಿಂದ ಬಂದ ಮಾನವ ವ್ಯಾಪಾರ.[೨] ಎಲ್ಲ ಭಾರತೀಯ ಭಾಷೆಗಳ ಮೇಲೂ ಸಂಸ್ಕೃತ, ಪ್ರಾಕೃತ, ಅರೇಬಿಕ್ ಮತ್ತು ಪರ್ಶಿಯನ್ ಭಾಷೆಗಳ ಪರಸ್ಪರ ಪ್ರಭಾವ ಬಿದ್ದಿದೆಯಲ್ಲದೆ, ಇತ್ತೀಚೆಗೆ ನಾನಾ ರೀತಿಯಿಂದ ಇಂಗ್ಲಿಷ್ ಸಾಹಿತ್ಯದ ಪ್ರಭಾವ ಹೆಚ್ಚಾಗಿದೆ.

ಮಹಾಕಾವ್ಯಗಳಾದ ರಾಮಾಯಣ ಮತ್ತು ಮಹಾಭಾರತಗಳು ಭಾರತೀಯ ಭಾಷೆಗಳಲ್ಲಿ ಅನುವಾದಗೊಂಡು ತನ್ಮೂಲಕ ಇಡೀ ಭಾರತದ ಸಮಾನ ಸ್ವತ್ತುಗಳಾಗಿವೆ. ಹಾಗೆಯೇ ಪಂಚತಂತ್ರ ಮತ್ತು ಕಥಾನಕಗಳು ಭಾಷಾಂತರಗಳ ಹಾಗೂ ರೂಪಾಂತರಗಳ ಮೂಲಕ ಎಲ್ಲ ಜನಪ್ರಿಯ ಭಾಷೆಗಳಲ್ಲೂ ನಿರಂತರವಾಗಿ ಜೀವಂತವಾಗಿವೆ. ಅದಲ್ಲದೆ ಇನ್ನೊಂದು ಗಮನಾರ್ಹ ಸಂಗತಿಯೆಂದರೆ ಸಂಸ್ಕೃತ ಸಾಹಿತ್ಯದಲ್ಲಿ ಧಾರ್ಮಿಕ ಹಾಗೂ ನೈತಿಕ ಅಂಶಗಳು ಪ್ರಧಾನವಾಗಿರುವಂತೆಯೇ ಭಾರತೀಯ ಭಾಷೆಗಳಲ್ಲೂ ಅವೇ ಅಂಶಗಳು ಹೆಚ್ಚಿನ ಸ್ಥಾನವನ್ನಾಕ್ರಮಿಸಿವೆ ಮತ್ತು ಬ್ರಾಹ್ಮಣ ಧರ್ಮ, ಹಿಂದೂ ಧರ್ಮಗಳಂತೆ, ಬೌದ್ಧಧರ್ಮ ಮತ್ತು ಜೈನಧರ್ಮಗಳಿಂದಲೂ ಈ ಅಂಶಗಳನ್ನು ಸಂಗ್ರಹಿಸಲಾಗಿದೆ.[೩]

ಈ ಮೇಲಿನ ಅಂಶಗಳನ್ನು ಗಮನಿಸುತ್ತ ಭಾರತದಲ್ಲಿ ಭಾಷಾಂತರದ ಬೆಳವಣಿಗೆಯನ್ನು ಆಯ್ದ ಕೆಲವು ಆರ್ಯನ್ ಮತ್ತು ದ್ರಾವಿಡ ಭಾಷೆಗಳ ಮೂಲಕ ಈ ಕೆಳಗಿನಂತೆ ನೋಡಬಹುದು. ಅವುಗಳೆಂದರೆ

೧. ಸಂಸ್ಕೃತ ಸಾಹಿತ್ಯದಲ್ಲಿ ಭಾಷಾಂತರದ ಬೆಳವಣಿಗೆ

೨. ಬಂಗಾಳಿ ಸಾಹಿತ್ಯದಲ್ಲಿ ಭಾಷಾಂತರದ ಬೆಳವಣಿಗೆ

೩. ಮರಾಠಿ ಸಾಹಿತ್ಯದಲ್ಲಿ ಭಾಷಾಂತರದ ಬೆಳವಣಿಗೆ

೪. ತಮಿಳು ಸಾಹಿತ್ಯದಲ್ಲಿ ಭಾಷಾಂತರದ ಬೆಳವಣಿಗೆ

೫. ತೆಲುಗು ಸಾಹಿತ್ಯದಲ್ಲಿ ಭಾಷಾಂತರದ ಬೆಳವಣಿಗೆ

೬. ಮಲೆಯಾಳಂ ಸಾಹಿತ್ಯದಲ್ಲಿ ಭಾಷಾಂತರದ ಬೆಳವಣಿಗೆ

## ಸಂಸ್ಕೃತ ಸಾಹಿತ್ಯದಲ್ಲಿ ಭಾಷಾಂತರದ ಬೆಳವಣಿಗೆ

ಭಾರತದಲ್ಲಿಯೇ ಅತ್ಯಂತ ಪ್ರಾಚೀನವಾದ ಭಾಷೆ ಸಂಸ್ಕೃತ. ಸಂಸ್ಕೃತ ಭಾಷೆಯು ಕ್ರಿ.ಪೂ.೨೫೦೦ ವರ್ಷಗಳಷ್ಟು ಪ್ರಾಚೀನವಾದದ್ದು. ವೇದಗಳ ಕಾಲದಲ್ಲಿ ಬೇರೆ ಬೇರೆ ಭಾಷೆಗಳನ್ನಾಡುವ ಜನರಿದ್ದರೆಂಬ ಉಲ್ಲೇಖವಿದೆ. ವೇದಗಳಲ್ಲಿ ಅನೇಕ ಅವೈದಿಕಾಂಶಗಳಿವೆಯೆಂದು ವಿದ್ವಾಂಸರು ಅಭಿಪ್ರಾಯ ಪಡುತ್ತಾರೆ. ಅಲ್ಲದೆ ಭಾರತದ ಎಲ್ಲಾ ಪ್ರಮುಖ ಭಾಷೆಗಳ ಮೇಲೆಯೂ ಸಂಸ್ಕೃತ ಭಾಷೆಯ ಪ್ರಭಾವ ಒಂದಲ್ಲ ಒಂದು ರೀತಿಯಿಂದ ಆಗಿದೆ. ಭಾರತದ ಯಾವುದೇ ಪ್ರಮುಖ ಭಾಷೆಯನ್ನು ನಾವು ಅವಲೋಕಿಸಿ ನೋಡಿದರೂ ಅದರಲ್ಲಿ ಯಥೇಚ್ಚವಾಗಿ ಸಂಸ್ಕೃತದ ಪದಗಳು ದೊರೆಯುತ್ತವೆ. ಆದುದರಿಂದ ಭಾರತದಲ್ಲಿ ಭಾಷಾಂತರ ಪ್ರಕ್ರಿಯೇ ಮೊದಲು ಆರಂಭವಾದದ್ದು ಸಂಸ್ಕೃತದಿಂದಲೇ, ಇದಕ್ಕೆ ಪ್ರಬಲವಾದ ಕಾರಣವೂ ಕೂಡ ಇದೆ. ಭಾರತೀಯ ಭಾಷೆಗಳಲ್ಲಿಯೇ ಮೊದಲು ಸಾಹಿತ್ಯ ರಚನೆ ಆರಂಭಗೊಂಡದ್ದು ಸಂಸ್ಕೃತದಲ್ಲಿ. ಹಾಗಾಗಿ ಒಂದು ಕಾಲದಲ್ಲಿ ಸಾಹಿತ್ಯವೆಂದರೆ, ಸಂಸ್ಕೃತ ಎಂದೇ ಹೇಳುವಂತಿತ್ತು. ಪ್ರಾಚೀನ ಭಾರತದ ರಾಜ-ಮಹಾರಾಜರುಗಳೆಲ್ಲ ಈ ಸಂಸ್ಕೃತಕ್ಕೆ ರಾಜಾಶ್ರಯವನ್ನು ಕೊಟ್ಟರು. ಆ ಕಾರಣದಿಂದ ಇದು ಇಡೀ ಭಾರತದಾದ್ಯಂತ ತುಂಬ ವ್ಯಾಪಕವಾಗಿ ಹರಡಿಕೊಂಡಿತು. ಹಾಗೆ ಹರಡಿಕೊಂಡ ಇದು ಆಯಾ ಪ್ರಾಂತ್ಯಗಳ ಜನ ಭಾಷೆಗಳಲ್ಲಿ ಮಿಳಿತವಾಗಿದೆ. ಮತ್ತೊಂದು ಅಂಶ ಎಂದರೆ ಪ್ರಾಚೀನ ಭಾರತದಲ್ಲಿ ಶಿಕ್ಷಣ ವಿದ್ಯೆ ಎಂದರೆ ಅದು ಸಂಸ್ಕೃತವನ್ನು ಕಲಿಯುವುದೇ ಆಗಿತ್ತು. ಈ ಅಂಶ ಕೂಡ ಎಲ್ಲಾ ಭಾಷೆಗಳ ಮೇಲೆ ಪ್ರಭಾವ ಬೀರಲು ಪ್ರಮುಖ ಕಾರಣವಾಗಿದೆ. ಅಲ್ಲದೆ ಅಂದು ಸಂಸ್ಕೃತವನ್ನು ಕಡ್ಡಾಯವಾಗಿ ಕಲಿಯಬೇಕಾಗಿತ್ತು.

ಸಂಸ್ಕೃತದ ಮಹಾಕಾವ್ಯಗಳಾದ ರಾಮಾಯಣ ಮತ್ತು ಮಹಾಭಾರತ, ಪುರಾಣಗಳು, ವೇದಗಳು, ಉಪನಿಷತ್ತುಗಳು ಹಲವಾರು ಭಾರತೀಯ ಮತ್ತು ಪಾಶ್ಚಾತ್ಯ ಭಾಷೆಗಳಿಗೆ ಭಾಷಾಂತರವಾಗಿವೆ. ಅಷ್ಟೇ ಅಲ್ಲದೆ 'ಪಂಚತಂತ್ರ'ವೆಂಬ ಕಥಾಸಂಗ್ರಹದ ವಿವಿಧ ರೂಪಾಂತರಗಳೂ ಪಾಠಾಂತರಗಳೂ ಇವೆ. ಇವುಗಳಲ್ಲಿ ತಂತ್ರೋಪಾಖ್ಯಾನ ಮತ್ತು ಹಿತೋಪದೇಶಗಳು ಪ್ರಮುಖ. ಈ ಕಥಾ ಸಂಗ್ರಹದ ಕಥೆಗಳು ಮಧ್ಯಪೂರ್ವದ ದೇಶಗಳಿಗೆ ಹೋದವು ಮತ್ತು ಅಲ್ಲಿ ಅವು ಮೊದಲು 'ಪಹಲವಿ' ಭಾಷೆಗೆ (ಕ್ರಿ.ಶ.೫೩೦-೭೯) ಅನುವಾದವಾದವು ಮತ್ತು ಆ ಭಾಷೆಯಿಂದ ಸಿರಿಯಾದ ಭಾಷೆಗೂ ಮತ್ತು ಅರಬ್ಬಿ ಭಾಷೆಗೂ ಅರಬ್ಬಿ ಭಾಷೆಯಿಂದ ಯುರೋಪ್‌ನ ಭಾಷೆಗಳಿಗೂ ಭಾಷಾಂತರಗೊಂಡವು. ಜಗತ್ತಿನ ಸುಮಾರು ೫೦ ಭಾಷೆಗಳಲ್ಲಿ ಪಂಚತಂತ್ರದ ೨೦೦ಕ್ಕಿಂತ ಹೆಚ್ಚು ಭಾಷಾಂತರಗಳಿವೆಯೆಂದು ತಿಳಿದುಬಂದಿದೆ.[೧]

ಸಂಸ್ಕೃತದ ಕಥೆಗಳಷ್ಟೇ ಅಲ್ಲ, ಖಗೋಳವಿಜ್ಞಾನ, ಗಣಿತಶಾಸ್ತ್ರ, ವೈದ್ಯಶಾಸ್ತ್ರಗಳನ್ನು ಅರಬ್ ದೇಶವು ಭಾರತದಿಂದ ತೆಗೆದುಕೊಂಡು ಪುನಃ ಪ್ರಸಾರ ಮಾಡಿತು. ಕ್ರಿ.ಶ.೮ನೆಯ ಹಾಗು ೯ನೆಯ ಶತಮಾನಗಳ ಅವಧಿಯಲ್ಲಿ ಅರಬ್ ದೇಶದ ವಿದ್ವಾಂಸರು ಈ ಶಾಸ್ತ್ರಗಳ ಮೇಲೆ ಸಂಸ್ಕೃತ ಗ್ರಂಥಗಳನ್ನು ಭಾಷಾಂತರಿಸುವ ಕಾರ್ಯದಲ್ಲಿ ತೊಡಗಿದ್ದರು.(ಕ್ರಿ.ಶ.೧, ೨ನೇ ಶತಮಾನದಲ್ಲಿದ್ದ) ಚರಕ, ಸುಶ್ರುತ (೬,೭ನೇ ಶತಮಾನದಲ್ಲಿನ) ಹಿರಿಯ ಹಾಗೂ ಕಿರಿಯ ವಾಗ್ಭಟರು ರಚಿಸಿದ ಗ್ರಂಥಗಳಲ್ಲಿ ಭಾರತದಲ್ಲಿ ಬಹಳ ಪ್ರಗತಿ ಸಾಧಿಸಿದ ಶಸ್ತ್ರಕ್ರಿಯೆಗಳು ನಡೆಯುತ್ತಿದ್ದವೆಂಬುದು ತಿಳಿದು ಬರುತ್ತದೆ. ಟಿಬೆಟ್, ಸಿಲೋನ್ ಮತ್ತು ದೂರದ ತನಕ ಹಬ್ಬಿದ ಭಾರತೀಯ ಉಪನಿವೇಶಗಳು ವೈದ್ಯಶಾಸ್ತ್ರವು ಸಂಪೂರ್ಣವಾಗಿ ಭಾರತದ ಮೇಲೆ ಅವಲಂಬಿಸಿತ್ತಷ್ಟೇ ಅಲ್ಲ, ಸಂಸ್ಕೃತ ವೈದ್ಯಶಾಸ್ತ್ರದ ಗ್ರಂಥಗಳ ಹಸ್ತಪ್ರತಿಗಳು ಮಧ್ಯ ಏಷಿಯಾದಲ್ಲಿ ಕೂಡ ಸಿಕ್ಕಿವೆ. ಯುರೋಪಿನಲ್ಲಿ ನಿರ್ಮಾಣವಾದ ಶಸ್ತ್ರಕ್ರಿಯೆಯ ಅನೇಕ ಆಧುನಿಕ ಉಪಕರಣಗಳು ಪ್ರಾಚೀನ ಭಾರತದಲ್ಲಿಯ ಮಾದರಿಗಳನ್ನೇ ಆಧರಿಸಿವೆ ಮತ್ತು ಅಂಗ ಛಿನ್ನಶಾಸ್ತ್ರ ಚಿಕಿತ್ಸೆ ಮತ್ತಿತರ ಶಸ್ತ್ರ ಚಿಕಿತ್ಸೆಗಳನ್ನು ಪಾಶ್ಚಾತ್ಯ ದೇಶಗಳು ಭಾರತದಿಂದಲೇ ಎರವಲು ತೆಗೆದುಕೊಂಡವು.

ಸಂಸ್ಕೃತಕ್ಕೆ ಇಂಡೋ ಯುರೋಪಿಯನ್ ಹಿನ್ನೆಲೆಯೂ ಪಾಶ್ಚಾತ್ಯ ಹಾಗೂ ಮಧ್ಯ ಏಷಿಯಾದ ದೇಶಗಳೊಡನೆ ನಿಕಟ ಸಂಪರ್ಕವೂ ಇತ್ತು. ಅದು ಅಥೆನ್ಸ್ ಮತ್ತು ಅಲೆಕ್ಸಾಂಡ್ರಿಯಾಗಳೊಡನೆ ತನ್ನ ಸಂಪರ್ಕ ಬೆಳೆಸಿತು. ಇವುಗಳೊಡನೆ ನಡೆದ ಆರ್ಥಿಕ ಹಾಗೂ ವಿಲಾಸಿ ಸರಕುಗಳ ವ್ಯವಹಾರವಷ್ಟೇ ಅಲ್ಲ ಬೌದ್ಧಿಕ ವ್ಯವಹಾರವೂ ಸಹ ಭಾರತವನ್ನು ಹೊರ ಜಗತ್ತಿನೊಡನೆ ಅವಿರತವಾಗಿ ನಿಕಟ ಸಂಬಂಧದಲ್ಲಿಟ್ಟಿತು. ಭಾರತ ಸಂಸ್ಕೃತ ಸಾಹಿತ್ಯವನ್ನು ಹೊರಜಗತ್ತಿಗೆ ಕೊಟ್ಟಿತು. ಭಾರತದ ಹೊರಗಿನ ದೇಶವಾಸಿಗಳು ಸಹ ಸಂಸ್ಕೃತವನ್ನು ಸಂಕರಗೊಂಡ ಸ್ವರೂಪದಲ್ಲಾದರೂ ಕಲಿತರು ಮತ್ತು ಬಳಸಿದರು. ಅಲ್ಲಲ್ಲಿ ಈಗಲೂ ಸಹ ಸಂಶೋಧಕರಿಗೆ ಸಂಸ್ಕೃತ ಹಸ್ತಪ್ರತಿಗಳು ದೊರೆಯುತ್ತವೆ. ಸಂಸ್ಕೃತವು ಬೌದ್ಧ ಮತದ ಮೂಲಕ ಟಿಬೆಟ್ ಮಧ್ಯ ಏಶಿಯಾ ಮತ್ತು ಚೀನಾಗಳಲ್ಲಿ ಹಬ್ಬಿತು. ಆ ದೇಶಗಳಲ್ಲಿ ಸ್ಥಾನೀಯ ಭಾಷೆಗಳಿಗೆ ಅನುವಾದಗೊಂಡ ಸಂಸ್ಕೃತದ ಬೌದ್ಧ ಸಾಹಿತ್ಯ ಉಪಲಬ್ಧವಿದೆ. ಭಾಷಾಂತರದ ಮೂಲಕ ಅಂದಿನ ದಿನಮಾನಗಳಲ್ಲಿ ಸಂಸ್ಕೃತವು ರಾಷ್ಟ್ರೀಯ ಏಕತೆಯ ಪ್ರತೀಕವೂ ಯುರೋಪ್ ಹಾಗೂ ಏಶಿಯಾ ಖಂಡಗಳ ಬಹುದೊಡ್ಡ ಭಾಗವನ್ನು ವ್ಯಾಪಿಸಿರುವ ಅಂತರಾಷ್ಟ್ರೀಯ ಸ್ನೇಹದ ಬಂಧನವೂ ಆಗಿದೆ.

ಸಂಸ್ಕೃತ ಸಾಹಿತ್ಯವು ಅನ್ಯಭಾಷೆಗಳಿಂದ ಸ್ವೀಕರಿಸಿರುವುದು ಅತ್ಯಲ್ಪ. ಇಷ್ಟಾಗಿಯೂ ಪ್ರಧಾನ ಗುರುದತ್ತ ಹೇಳುವಂತೆ ರಾಮಚಂದ್ರ ಮುಮುಕ್ಷುವಿನ 'ಪುಣ್ಯಾಸ್ರವ' ಚಂಪೂವಿನ ಸುಕುಮಾರ ಚರಿತೆಯ ಭಾಗಕ್ಕೆ ಶಾಂತಿನಾಥನ 'ಸುಕುಮಾರ ಚರಿತೆ' (೧೧ನೇ ಶತಮಾನ) ಆಧಾರವೆಂದು ಹೇಳಲಾಗಿದೆ. ಚಾಮರಸನ 'ಪ್ರಭುಲಿಂಗಲೀಲೆ', ನಿಜಗುಣ ಶಿವಯೋಗಿಯ 'ವಿವೇಕ ಚಿಂತಾಮಣಿ' ಸಂಸ್ಕೃತಕ್ಕೆ ಇಡಿಯಾಗಿ ಅಥವಾ ಆಂಶಿಕವಾಗಿ ಕನ್ನಡ ಸಾಹಿತ್ಯದಿಂದ ಅನುವಾದಗೊಂಡಿವೆ ಎಂದು ತಿಳಿದುಬರುತ್ತದೆ.

ಈ ಎಲ್ಲಾ ಅಂಶಗಳನ್ನು ಗಮನಿಸಿದಾಗ ಸಂಸ್ಕೃತವು ಸ್ವೀಕರಿಸಿರುವುದಕ್ಕಿಂತ ಕೊಟ್ಟಿರುವುದೇ ಹೆಚ್ಚು, ಭಾಷಾಂತರ ಇಲ್ಲಿ ಹೊರಮುಖವಾಗಿದೆಯೆ ಹೊರತು ಒಳಮುಖವಾಗಿ ನಡೆದಿರುವುದು ಅತ್ಯಲ್ಪ ಎಂದು ತಿಳಿಯುತ್ತದೆ.

**ಬಂಗಾಳಿ ಸಾಹಿತ್ಯದಲ್ಲಿ ಭಾಷಾಂತರದ ಬೆಳವಣಿಗೆ**

ಕ್ರಿ.ಶ.೧೪ನೇ ಶತಮಾನದಲ್ಲಿ ರಾಮಾಯಣ ಮತ್ತು ಮಹಾಭಾರತ, ಭಾಷಾಂತರ ಮತ್ತು ರಾಮಾಯಣ, ಮಹಾಭಾರತ ಆಧಾರಿತ ಕೃತಿಗಳ ರಚನೆಯೊಂದಿಗೆ ಬಂಗಾಳಿಯಲ್ಲಿ ಭಾಷಾಂತರ ಆರಂಭವಾಯಿತು. 'ಕೃತ್ತಿದಾಸ ಓಝು' ಎಂಬುವನು ರಾಮಾಯಣವನ್ನು ಬಂಗಾಳಿಯಲ್ಲಿ ಬರೆದನು. ಅದೇ ಕಾಲದಲ್ಲಿ ಬಂದ ಸಂಜಯನು ಬಂಗಾಳಿಯಲ್ಲಿ ಮಹಾಭಾರತವನ್ನು ರೂಪಾಂತರಿಸಿದನು. ಇದು ಬಂಗಾಳಿ ರೂಪಾಂತರಗಳಲ್ಲೆಲ್ಲ ಪ್ರಾಚೀನತಮವಾದುದು. ಆದರೆ ಎಲ್ಲಕ್ಕಿಂತ ಹೆಚ್ಚು ಪ್ರಸಿದ್ಧವಾದ ಮಹಾಭಾರತದ ಬಂಗಾಳಿ ಭಾಷಾಂತರವೆಂದರೆ, ಕಾಶೀರಾಮನದು(ಸುಮಾರು ಕ್ರ.ಶ.೧೬೪೫). ಅವನ ನಂತರ ಸುಮಾರು ಕ್ರಿ.ಶ.೧೪೭೩ ರಿಂದ ೧೪೮೦ರೊಳಗೆ ಭಾಗವತ ಪುರಾಣವು "ಮಾಲಾಧರ ವಸುವಿನಿಂದ ಬಂಗಾಳಿಗೆ ಭಾಷಾಂತರಿಸಲ್ಪಟ್ಟಿತು. ಇವನ ನಂತರ ಅನೇಕ ಸಂಸ್ಕೃತ ಕಾವ್ಯಗಳು ಬಂಗಾಳಿಗೆ ಅನುವಾದಗೊಂಡವು.[೧೨]

ಕ್ರಿ.ಶ.೧೬೫೯ರಲ್ಲಿ ಜೀವಿಸಿದ್ದ ಅಲೌಲನು ಸೋಫಿ ಮತದವನಾಗಿದ್ದು, ಸಂಸ್ಕೃತ ಮತ್ತು ಪರ್ಶಿಯನ್ ಭಾಷೆಗಳ ವಿದ್ವಾಂಸನಾಗಿದ್ದು, ಹಿಂದಿ ಸಾಹಿತ್ಯವನ್ನು ಬಲ್ಲವನಾಗಿದ್ದನು. ಇವನು ಜೌಯಸಿ ಕವಿಯ 'ಪದ್ಮಾವತೀ' ಕಾವ್ಯವನ್ನು ಬಂಗಾಲಿಗೆ ಅನುವಾದ ಮಾಡಿದನು. ಇದು ಅವನ ಸರ್ವೋತ್ಕೃಷ್ಟ ಕೃತಿ.[೧೩]

ರಷ್ಯದ ಸಾಹಿತಿ ಗೇರೇಸಿಯಮೆ ಲೆಬೆಡಾಸ್ ಎಂಬುವವನು. (೧೭೪೯-೧೮೧೮) ಇಂಗ್ಲಿಷ್ ಪ್ರಹಸನದ ಬಂಗಾಲಿ ರೂಪಾಂತರವನ್ನು ರಂಗದ ಮೇಲೆ ತಂದು ಬಂಗಾಲಿ ರಂಗಭೂಮಿಯನ್ನು ಬೆಳೆಸಿದನು. ೧೮೫೨ರಿಂದ ಮುಂದೆ ೨೫ ವರ್ಷಗಳವರೆಗೆ ಬಂಗಾಳಿ ನಾಟಕಗಳು ಸಂಸ್ಕೃತ ಇಲ್ಲವೇ ಇಂಗ್ಲಿಷ್ ನಾಟಕಗಳ ರೂಪಾಂತರಗಳಾಗಿದ್ದವು.[೧೪]

೧೯ನೇ ಶತಮಾನದ ಆದಿ ಭಾಗದಲ್ಲಿ ಬಹುತೇಕ ಎಲ್ಲಾ ಭಾರತೀಯ ಸಾಹಿತ್ಯಗಳಂತೆ ಆಧುನಿಕ ಬಂಗಾಳಿ ಸಾಹಿತ್ಯದ ಮೇಲೂ ಕೂಡ ಪಾಶ್ಚಿಮಾತ್ಯರ ಪ್ರಭಾವ ಬಿದ್ದಿತು. ಕ್ರೈಸ್ತಮತ ಪ್ರಚಾರಕ್ಕಾಗಿ ಬಂದ ಯುರೋಪಿಯನ್ ಪಾದ್ರಿಗಳು ಸ್ವತಃ ಬಂಗಾಳಿಯನ್ನು ಕಲಿತು ಬಂಗಾಳಿಯಲ್ಲೆ ಬೈಬಲನ್ನು ರಚಿಸಿದರು. ಏಸುಕ್ರಿಸ್ತನ ಜೀವನ ಉಪದೇಶಗಳನ್ನು ಸಾರುವ ಅನೇಕ ಚಿಕ್ಕಪುಟ್ಟ ಪುಸ್ತಕಗಳನ್ನು ಪ್ರಕಟಿಸಿದರು. ಅನೇಕ ಇಂಗ್ಲಿಷ್ ಕೃತಿಗಳು ಬಂಗಾಳಿಗೆ ಅನುವಾದಗೊಂಡವು. ಯುರೋಪಿಯನ್ ಪಾದ್ರಿ ವಿಲಿಯಂ ಕ್ಯಾರಿ ಎಂಬುವವನು ಬಂಗಾಳಿ ಭಾಷೆಯನ್ನು ಆಳವಾಗಿ ಅಭ್ಯಾಸಿಸಿ ಬಂಗಾಳಿ-ಇಂಗ್ಲಿಷ್ ನಿಘಂಟು ಮತ್ತು ವ್ಯಾಕರಣವನ್ನು ರಚಿಸಿದನು.

ಬಂಗಾಳಿಯ ಪ್ರಸಿದ್ಧ ಸಾಹಿತಿಗಳಾದ ಬಂಕಿಮಚಂದ್ರರು, 'ದುರ್ಗೇಶನಂದಿನಿ' ಎಂಬ ಕಾದಂಬರಿಯನ್ನು ಬರೆದರು. ಇದು ಅನೇಕ ಭಾರತೀಯ ಭಾಷೆಗಳಿಗೆ ಅನುವಾದಗೊಂಡು ಜನಪ್ರಿಯವಾಯಿತು. ರವೀಂದ್ರನಾಥ ಟಾಗೋರರು ಬಂಗಾಳಿಯಲ್ಲಿ ರಚಿಸಿದ 'ಗೀತಾಂಜಲಿ' ಎಂಬ ಕೃತಿ (೧೯೧೩) ಇಂಗ್ಲಿಷ್ ಗೆ ಅವರಿಂದಲೇ ಭಾಷಾಂತರಗೊಂಡು ಪ್ರಪಂಚದ ಶ್ರೇಷ್ಠ ಪಾರಿತೋಷಕವಾದ 'ನೋಬಲ್ ಪ್ರಶಸ್ತಿ' ಪಡೆದಿದೆ. ಅಲ್ಲದೆ ಇವರ ಪದ್ಯಕಾವ್ಯಗಳು, ನಾಟಕಗಳು, ಕತೆಗಳು ಹಾಗೂ ಗದ್ಯರಚನೆಗಳು ಇಂಗ್ಲಿಷ್ ಮತ್ತು ಜರ್ಮನ್ ಭಾಷಾಂತರಗಳ ಮೂಲಕ ವಿಶ್ವವಿಖ್ಯಾತವಾಗಿವೆ.[೨೫]

ಭಾರತೀಯ ಸಾಹಿತ್ಯಕ ವಲಯದಲ್ಲಿಯೇ ಅಗ್ರಮಾನ್ಯ ಸ್ಥಾನದಲ್ಲಿರುವುದೆಂದರೆ ಈ ಬಂಗಾಲಿ ಸಾಹಿತ್ಯವೆಂದೇ ಹೇಳಬೇಕು. ಬಹುಪಾಲು ಬಂಗಾಲಿ ಕೃತಿಗಳು ಭಾರತೀಯ ಬಹುತೇಕ ಭಾಷೆಗಳಿಗೆ ಭಾಷಾಂತರ ಹೊಂದಿ ಜನಪ್ರಿಯವಾಗಿರುವುದನ್ನು ನಾವು ಕಾಣಬಹುದಾಗಿದೆ.

### ಮರಾಠಿ ಸಾಹಿತ್ಯದಲ್ಲಿ ಭಾಷಾಂತರದ ಬೆಳವಣಿಗೆ

ಮರಾಠಿಯಲ್ಲಿ ಭಾಷಾಂತರ ಬೆಳವಣಿಗೆ ಕಂಡಿರುವುದು ೧೮೧೭ರಲ್ಲಿ ತಂಜಾವೂರಿನ ರಾಜನು ಮರಾಠಿ ಸಾಹಿತ್ಯವನ್ನು ಶ್ರೀಮಂತಗೊಳಿಸುವುದಾಗಿ ನಿರ್ಣಯಿಸಿ, ಮೊಟ್ಟಮೊದಲಿಗೆ ಇಂಗ್ಲಿಷ್‌ನಿಂದ ಮರಾಠಿಗೆ ಕೃತಿಗಳನ್ನು ಅನುವಾದಿಸಲು ಪ್ರಾರಂಭಿಸಿದ. ಈ ದಿಕ್ಕಿನಲ್ಲಿ ಎರಡನೆ ಪ್ರಯತ್ನ ಪ್ರಖ್ಯಾತ ಧರ್ಮ ಪ್ರಚಾರಕನಾದ ಡಾ. ಕಾರ್ಸಿಯಿಂದ ಕಲಕತ್ತೆಯಲ್ಲಿ ನಡೆಯಿತು. 'ಫಾದರ್ ಸಿಫೆನ್ಸ್' ಎಂಬ ಪಾದ್ರಿಯು ಮರಾಠಿ ಭಾಷೆಯನ್ನು ಕಲಿತು ಮರಾಠಿಯಲ್ಲಿಯೇ 'ಕ್ರಿಸ್ತಪುರಾಣ' ಎಂಬ ಕೃತಿಯನ್ನು ರಚಿಸಿದ್ದಾನೆ. ಕನ್ನಡದಲ್ಲಿ ಕಿಟೆಲ್ ಕನ್ನಡ-ಇಂಗ್ಲಿಷ್ ನಿಘಂಟು ಬರೆದರೆ, ಮರಾಠಿಯಲ್ಲಿ ಅನೇಕ ಜನ ಪಾಶ್ಚಾತ್ಯ ವಿದ್ವಾಂಸರು ಮರಾಠಿ-ಇಂಗ್ಲಿಷ್ ನಿಘಂಟುಗಳನ್ನು ಬರೆದನು.

ಮುಂಬೈನ ಮೊದಲ ರಾಜ್ಯಪಾಲ ಎಲ್‌ಫಿನ್‌ಸ್ಟನ್ನನು ಮರಾಠಿ ಸಾಹಿತ್ಯದ ಅಭಿವೃದ್ಧಿಗೆ ಪ್ರೋತ್ಸಾಹಕೊಟ್ಟು, ಮರಾಠಿ ಮೂಲ ಮತ್ತು ಮರಾಠಿಯಲ್ಲಿ ಅನುವಾದಿತವಾಗುವ ಗ್ರಂಥಗಳು ಪ್ರಕಟವಾಗಲು ಅನುಕೂಲ ಮಾಡಿಕೊಟ್ಟ. ಈ ತೆರನಾಗಿ ಮರಾಠಿಯಲ್ಲಿ ಭಾಷಾಂತರದ ಬೆಳವಣಿಗೆಯನ್ನು ಕಾಣಬಹುದಾಗಿದೆ.

### ತಮಿಳು ಸಾಹಿತ್ಯದಲ್ಲಿ ಭಾಷಾಂತರದ ಬೆಳವಣಿಗೆ

ಭಾರತದಲ್ಲಿ ಸಂಸ್ಕೃತವನ್ನು ಬಿಟ್ಟರೆ ಎರಡನೆಯ ಪ್ರಾಚೀನ ಭಾಷೆ ತಮಿಳು ಅಲ್ಲದೆ ಪಂಚದ್ರಾವಿಡ ಭಾಷೆಗಳಲ್ಲಿಯೇ ಮೊಟ್ಟ ಮೊದಲ ಭಾಷೆ ತಮಿಳು. ಇದು ಭಾರತದಲ್ಲಿಯೇ ಅಲ್ಲದೆ ಹೊರದೇಶಗಳಾದ ಶ್ರೀಲಂಕಾ, ಬರ್ಮಾ, ಮಲೇಶಿಯಾ, ಇಂಡೋನೇಷಿಯಾ, ವಿಯಟ್ನಾಂ, ದಕ್ಷಿಣ ಹಾಗೂ ಪೂರ್ವ ಆಫ್ರಿಕಾ, ಜರ್ಮನಿ, ಜಪಾನ್, ಚೀನ, ಜಾವ, ಫಿಜಿ, ಜಮೈಕಾ, ಲಕ್ಷದ್ವೀಪ, ಟ್ರೈನಿಡಾಡ್, ಮಡಗಾಸ್ಕರ್,

ಮರಿಷಸ್, ಕೌಲಲಂಪುರ ಈ ಮುಂತಾದ ಕಡೆಗಳಲ್ಲಿಯೂ ತಮಿಳು ಮಾತನಾಡುವ ಬಹಳಷ್ಟು ಜನರಿದ್ದಾರೆ. ಹಾಗಾಗಿ ಈ ಭಾಷೆಯಲ್ಲಿ ಭಾಷಾಂತರ ಪ್ರಕ್ರಿಯೆ ಹೆಚ್ಚು ನಡೆದಿದೆ.[೧೬]

ತಮಿಳು ಸಾಹಿತ್ಯ ಚರಿತ್ರೆಯು ಕ್ರಿ.ಪೂ.೫ನೇ ಶತಮಾನದಿಂದ ಆರಂಭವಾಗುತ್ತದೆ. ಸಂಘಂ ಎಂಬ ಸಾಹಿತ್ಯ ಪಂಥವು ಉದಯವಾಗಿ ಆ ಮೂಲಕ ಪಂಚಮಹಾಕಾವ್ಯಗಳಾದ, 'ಶಿಲಪ್ಪದಿಗಾರಂ', 'ಮಣಿಮೇಖಲೈ', 'ಚೂಡಾಮಣಿ', 'ಕುಂಡಲಕೇಶಿ', 'ಎಳೆಯಾಪತಿ'ಗಳು ರಚನೆಯಾಗಿವೆ. ಉತ್ತರ ಭಾರತದ ಕಡೆಯಿಂದ ಬೌದ್ಧರು ಹಾಗೂ ಜೈನರು ದಕ್ಷಿಣದತ್ತ ಬಂದು ಕಂಚಿ, ಮಧುರೆ ಮುಂತಾದ ಪ್ರಮುಖ ನಗರಗಳಲ್ಲಿ ನೆಲೆಸಿ ಸಂಸ್ಕೃತದ ಮಾದರಿಯಲ್ಲಿ ಈ ಗ್ರಂಥಗಳನ್ನು ರಚಿಸಿದ್ದಾರೆ ಎಂದು ಹೇಳಲಾಗಿದೆ. ಈ ಅಂಶವನ್ನು ಗಮನಿಸಿದರೆ ಕ್ರಿ.ಪೂ.೪೫೦ ರಿಂದಲೇ ತಮಿಳು ಸಾಹಿತ್ಯದಲ್ಲಿ ಭಾಷಾಂತರ ಪ್ರಕ್ರಿಯೆ ಆರಂಭವಾಗಿರುವುದನ್ನು ಕಾಣುತ್ತೇವೆ.

ಸಂಸ್ಕೃತ ಮತ್ತು ತಮಿಳು ಮಿಶ್ರಣವಾದ 'ಮಣಿಪ್ರವಾಳ' ಶೈಲಿಯ ಆದಿಕ್ಯ ಕಂಡುಬಂದದ್ದು ೧೦ ರಿಂದ ೧೫ನೇ ಶತಮಾನದ ನಡುವಿನಲ್ಲಿ ರಾಮಾಯಣದ ರೂಪಾಂತರಗಳಲೆಲ್ಲ ತುಂಬ ಪ್ರಸಿದ್ಧವಾದುದೆಂದರೆ ಕಂಬನು ಬರೆದ 'ರಾಮಾಯಣ' ಕಾಲ ಕ್ರಿ.ಶ.೧೧ನೇ ಶತಮಾನ ಎಂದು ಅಂದಾಜಿಸಲಾಗಿದೆ. ತಮಿಳಿನಲ್ಲಿ ಬಂದ ಮಹಾಭಾರತದ ರೂಪಾಂತರಗಳು ಆನಂತರ ಕಾಲದವು ತಮಿಳಿನಲ್ಲಿ ಕೆಲವು ಮಹಾಕಾವ್ಯಗಳು ಜೈನರಿಂದಲೂ ರಚಿತವಾಗಿವೆ. ಅವುಗಳಲ್ಲಿ ಮುಖ್ಯವಾಗಿ ''ಸಿಂದಾಮನಿ', (ಚಿಂತಾಮಣಿ) ಮತ್ತು ಅದರ ಅನುಕರಣವಾದ 'ಶೂಳಾಮಣಿ'(ಚೂಡಾಮಣಿ)ಗಳನ್ನು ಇಲ್ಲಿ ಉಲ್ಲೇಖಿಸಬಹುದು.

ರಾಮಾನುಜನ ಅನುಯಾಯಿಗಳಲ್ಲೆ ತುಂಬ ಮುಖ್ಯವಾದವನೆಂದರೆ ಪಿಳ್ಳೈ ಲೋಕಾಚಾರ್ಯ (ಜನ್ಮವರ್ಷ, ಕ್ರಿ.ಶ.೧೨೧೩) ಇವನು ಸಂಸ್ಕೃತ ಭೂಯಿಷ್ಠವಾದ ಒಂದು ಜನಪ್ರಿಯ ತಮಿಳು ಭಾಷಾರೂಪದಲ್ಲಿ '೧೮ ರಹಸ್ಯ'ಗಳನ್ನು ರಚಿಸಿದ್ದಾನೆ. ಇವು ಸಂಸ್ಕೃತಕ್ಕೂ ಭಾಷಾಂತರಿಸಲ್ಪಟ್ಟಿವೆ.[೧೭]

ಇನ್ನು ಮಧ್ಯಕಾಲಿನ ತಮಿಳು ಸಾಹಿತ್ಯದಲ್ಲಿ (೧೬ ರಿಂದ ೧೯ನೇ ಶತಮಾನದಲ್ಲಿ) ಇತರ ದ್ರಾವಿಡ ಭಾಷೆಗಳು ಮುಖ್ಯವಾಗಿ ಕನ್ನಡ-ತೆಲುಗು(ವಿಜಯನಗರ ಸಾಮ್ರಾಜ್ಯದ ಆದಿಪತ್ಯದ ಕಾರಣದಿಂದ) ಹಾಗೂ ಇತರ ಇಂಡೋ ಆರ್ಯನ್ ಭಾಷೆಗಳಾದ ಉರ್ದು, ಅರೇಬಿಕ್, ಪರ್ಶಿಯನ್ ಮತ್ತು ಮರಾಠಿ ಭಾಷೆಗಳ ಪದಗಳು ತಮಿಳನ್ನು ಸೇರಿರುವುದು ಕಾಣುತ್ತೇವೆ.

ಪಾಶ್ಚಾತ್ಯ ಪ್ರಭಾವದಿಂದ ಗದ್ಯವೂ ಇಂದು ಒಂದು ಸಾಹಿತ್ಯ ಮಾಧ್ಯಮವಾಗಿದೆ. ಈ ಪ್ರಭಾವದಿಂದ ಕಾದಂಬರಿ, ಸಣ್ಣಕಥೆ ಮುಂತಾದ ಹೊಸ ಸಾಹಿತ್ಯ ಪ್ರಕಾರಗಳು ರೂಪುಗೊಂಡವು. ಅಲ್ಲದೆ ಸುಮಾರು ೧೯೦೮ರಷ್ಟು ಮುಂಚೆಯೇ ಮಲೆಯಾಳಂ ಕಾದಂಬರಿ 'ಇಂದುಲೇಖ' ತಮಿಳು ರೂಪಾಂತರ 'ವಿವೇಕಬೋಧಿನಿ'ಯಲ್ಲಿ ಧಾರವಾಹಿಯಾಗಿ ಪ್ರಕಟಗೊಂಡಿತು. (ತಮಿಳು ಕಾದಂಬರಿ ನೂರಾಂಡು ವರಲಾರು ವಯೀರ ಸೀಯಂ, ಪು.೧೫೩) ಬಂಕಿಮಚಂದ್ರ, ರವೀಂದ್ರನಾಥ ಟಾಗೋರ ಮತ್ತು

ಶರತ್‌ಚಂದ್ರರ ಕುಮುದಿನಿಗಳನ್ನು ಎ.ಕೆ.ಜಯರಾಮನ್ ತಮಿಳಿಗೆ ಭಾಷಾಂತರಿಸಿದರು. 'ಶುದ್ಧಾನಂದ' ಮತ್ತು 'ದಿ ಲಾಫಿಂಗ್ ಮ್ಯಾಸ್' ತಮಿಳಿನ ಕಥಾ ಸಾಹಿತ್ಯ ಲೇಖಕರಿಗೆ ಒಟ್ಟಾರೆ ಹೊಸ ದಿಗಂತವನ್ನೇ ತೆರೆದವು. ಕ.ಶ್ರೀ.ಶ್ರೀನಿವಾಸಾಚಾರ್ಯರವರು ಅನುವಾದಿಸಿದ ವಿ.ಎಸ್.ಖಾಂಡೇಕರ್ ಅವರ 'ಜಲಾಲಿ ಮೊಹರ್' ಅನುವಾದ (ತಮಿಳಿನಲ್ಲಿ ಕರಗಿಯ ಮೊತ್ತು) ಆಧುನಿಕ ತಮಿಳು ಸಾಹಿತ್ಯದಲ್ಲಿ ವ್ಯಾಪಕ ಪರಿಣಾಮ ಉಂಟು ಮಾಡಿದ ಘಟನೆ ಎಂದೇ ಪರಿಗಣಿಸಲಾಯಿತು. ಈ ತೆರನಾಗಿ ತಮಿಳಿನಲ್ಲಿ ಭಾಷಾಂತರದ ಬೆಳವಣಿಗೆ ಸಮೃದ್ಧವಾಗಿ ಬೆಳೆದು ಬಂದಿರುವುದಾಗಿ ಗುರುತಿಸಲಾಗಿದೆ.[೧೮]

### ತೆಲುಗು ಸಾಹಿತ್ಯದಲ್ಲಿ ಭಾಷಾಂತರದ ಬೆಳವಣಿಗೆ

ತೆಲುಗಿನಲ್ಲಿ ಭಾಷಾಂತರ ಪ್ರಾರಂಭವಾಗುವುದು ಆದಿ ಮಹಾಕಾವ್ಯವೆಂದು ಹೇಳಲಾಗುವ ನನ್ನಯ್ಯ ಕವಿಯ (ಕ್ರಿ.ಶ.೧೦೨೦) 'ಮಹಾಭಾರತ' ಗ್ರಂಥದಿಂದ. ಇದು ಸಂಸ್ಕೃತ ಮಹಾಭಾರತದ ಭಾಷಾಂತರವಾಗಿದ್ದು, ಕನ್ನಡದ ಪಂಪ, ರನ್ನರಂತೆ 'ನನ್ನಯ್ಯ'ನು ತನ್ನದೇ ಆದ ಸ್ವಂತಿಕೆಯನ್ನು ಒಡಮೂಡಿಸಿದ್ದಾನೆ. ಇದಾದ ನಂತರ, ಕ್ರಿ.ಶ.೧೩ನೇ ಶತಮಾನದಲ್ಲಿ 'ಲೆಕ್ಕನ್ನ' ಎಂಬುವನು ನನ್ನಯ್ಯನಿಂದ ಆರಂಭಗೊಂಡ ಮಹಾಭಾರತದ ಭಾಷಾಂತರ ಕಾರ್ಯವನ್ನು ಮುಂದುವರೆಸಿದ್ದಾನೆ. ಹಾಗೆಯೇ ೧೪ನೇ ಶತಮಾನದ 'ಯರ್‍ರನ್ನನೂ' ಕೂಡ ಅದೇ ಕೆಲಸವನ್ನು ಮಾಡಿದ್ದಾನೆ.[೧೯]

ಇನ್ನು ೧೪-೧೫ನೇ ಶತಮಾನಕ್ಕೆ ಬಂದರೆ ಪ್ರಮುಖ ಕವಿಗಳಾದ ಶ್ರೀನಾಥ ಮತ್ತು ಪೋತನರನ್ನು ಕಾಣಬಹುದು. ಶ್ರೀನಾಥನ ಅನೇಕ ಕೃತಿಗಳು ಅನುವಾದಗಳೇ ಆಗಿದ್ದರೂ, ಆತನ 'ಅನುವಾದ ಕಲೆ' ಅನುಪಮವಾದದ್ದು. ಆತನ 'ಶೃಂಗಾರ ನೈಷಧವು' ತೆಲುಗು ಸಾಹಿತ್ಯದಲ್ಲಿ ಅಮೋಘವಾದ ಗ್ರಂಥ. ಅದು ಪಾಂಡಿತ್ಯಪೂರ್ಣ ಕವಿತಾ ಪ್ರತಿಭೆಯುಳ್ಳದ್ದೂ ಆಗಿದೆ. ಇದನ್ನು ಅನುವಾದಿಸುವಾಗ ಔಚಿತ್ಯಕ್ಕಾಗಿ ಅಕ್ಷರಶಃ ಹಲವು ಚಿಕ್ಕಪುಟ್ಟ ಬದಲಾವಣೆಗಳನ್ನು ಅಲ್ಲಲ್ಲಿ ಮಾಡಿಕೊಂಡನು. ಆತನ ಅನುವಾದವು ಹಲವೆಡೆಗಳಲ್ಲಿ ಮೂಲವನ್ನೇ ಸುಧಾರಿಸಿದ್ದು ತರುವಾಯ ಬಂದ ಕವಿಗಳ ಮೇಲೆ ವಿಶೇಷ ಪ್ರಭಾವ ಬೀರಿದೆ. 'ಪೂತನ'ನು ಮಹಾಭಕ್ತ 'ಭಾಗವತವನ್ನು ತೆಲುಗಿಗೆ ಪರಿವರ್ತಿಸಿದನು.

ಆಧುನಿಕ ಯುಗಕ್ಕೆ ಬಂದರೆ ತನ್ಮೂಲ ಸೀತಾರಾಮಮೂರ್ತಿಯವರು ತೆಲುಗಿನಲ್ಲಿ ಗಾಂಧೀಜಿಯವರ 'ಆತ್ಮಕಥೆ'ಯನ್ನು ಅನುವಾದಿಸಿದರು. 'ಧರ್ಮಾವರಂ ರಾಮಕೃಷ್ಣಾಚಾರ್ಯ', 'ವೀರೇಶಲಿಂಗಂ ಪಂತಲು', 'ವೇದಂ ವೆಂಕಟರಾಯಶಾಸ್ತ್ರಿ', 'ಪಾನುಗಂಟಿ', 'ತಿರುಪತಿ ವೆಂಕಟಾಕವುಲು', 'ವಡ್ಡಾದಿ' ಚಿಲಕಮೂರ್ತಿ, 'ಬಲಿಜೇಪಲ್ಲಿ' ಮತ್ತು 'ಗುರುಜಾಡಾದಿಗಳು ಅನೇಕ ಜನಾದರಣೀಯವಾದ ಸ್ವಾತಂತ್ರ್ಯ ಮತ್ತು ಅನುವಾದ ಕೃತಿಗಳನ್ನು ರಚಿಸಿದರು. ಅಲ್ಲದೆ ಕಾವ್ಯ ಕಾದಂಬರಿ, ಸಣ್ಣಕಥೆ, ನಾಟಕಗಳನ್ನು ಇಂಗ್ಲಿಷ್, ಹಿಂದಿ, ಬಂಗಾಲಿಯಿಂದ ಅನುವಾದಿಸಿದರು.[೨೦]

'ಚಿಲಕಮರ್ತಿ ಲಕ್ಷ್ಮೀ ನರಸಿಂಹಂ' ಎಂಬಾತ 'ರಮೇಶದತ್ತ'ನ "ಕಲ್ಪವೃಕ್ಷಗಳ ಸುರಸ್ಥು" ಎಂಬ ಕೃತಿಯನ್ನು ಶ್ಲಾಘ್ಯವಾಗಿ ಭಾಷಾಂತರಿಸುವ ಮೂಲಕ ಆ ತಲೆಮಾರಿನ ಆಂಧ್ರರಿಗೆ ಬಂಗಾಳಿ ಜನರ ಜೀವನವನ್ನು ಧ್ಯೇಯವನ್ನು ಪರಿಚಯ ಮಾಡಿಕೊಟ್ಟಿದ್ದಾನೆ. ಇಂಥ ಒಳ್ಳೆ ಕೆಲಸವನ್ನು 'ವೆಂಕಟಪಾರ್ವತೀಶ್ವರ ಕವಲು' ಎಂಬಾತನು ಬಂಕಿಮಚಂದ್ರನ ಮತ್ತು ಇನ್ನು ಅನೇಕರ ಬಂಗಾಳಿ ಕಾದಂಬರಿಗಳನ್ನು ಅನುವಾದ ಮಾಡಿಕೊಟ್ಟಿದ್ದಾನೆ.

ಈ ಮೇಲಿನ ಅಂಶಗಳಿಂದ ಗುರುತಿಸುವುದಾದರೆ ಆರಂಭದ ದಿನಗಳಲ್ಲಿ ತೆಲುಗಿನಲ್ಲಿ ಸಂಸ್ಕೃತದಿಂದಲೂ ಆಧುನಿಕ ಕಾಲದಲ್ಲಿ ಇಂಗ್ಲಿಷ್, ಹಿಂದಿ, ಬಂಗಾಳಿ ಭಾಷೆಗಳಿಂದಲೂ ಭಾಷಾಂತರ ಪ್ರಕ್ರಿಯೆ ನಡೆದಿರುವುದನ್ನು ಕಾಣುತ್ತೇವೆ.

**ಮಲೆಯಾಳಂ ಸಾಹಿತ್ಯದಲ್ಲಿ ಭಾಷಾಂತರದ ಬೆಳವಣಿಗೆ**

ಮಲೆಯಾಳಂ ಸಾಹಿತ್ಯ ಚರಿತ್ರೆಯು ಜೊತೆ ಜೊತೆಗೆ ಭಾಷಾಂತರ ಚರಿತ್ರೆಯು ಆರಂಭವಾದುದು. ೧೩ನೇ ಶತಮಾನದಲ್ಲಿ ಈ ಕಾಲದಲ್ಲಿಯೇ ರಾಮಾಯಣ, ಮಹಾಭಾರತ ಮತ್ತು ಭಾಗವತಗಳ ಅನುವಾದಗಳು ಯತೇಚ್ಛವಾಗಿ ಮೂಡಿಬಂದಿರುವುದನ್ನು ಕಾಣಬಹುದಾಗಿದೆ. ಹಲವು ಶತಮಾನಗಳ ವಿಕಾಸ ಪಥದಲ್ಲಿ ಮಲಯಾಳಂ ಬೇರೆ ಬೇರೆ ಭಾಷೆಗಳೊಡನೆ ವಿಭಿನ್ನ ಪ್ರಮಾಣದ, ಸಂಪರ್ಕವನ್ನು ಪಡೆಯಿತು. ಸಂಸ್ಕೃತ, ಪ್ರಾಕೃತ, ಪಾಲಿ, ಮರಾಠಿ, ಹಿಂದಿ, ಉರ್ದು, ಅರೇಬಿಕ್, ಪರ್ಶಿಯನ್, ಸಿರಿಯಾಕ್, ಪೋರ್ಚುಗೀಸ್, ಡಚ್, ಫ್ರೆಂಚ್ ಮತ್ತು ಇಂಗ್ಲಿಷ್ ಇವೆ ಸಂಪರ್ಕಕ್ಕೆ ಬಂದ ಭಾಷೆಗಳು.

೧೩೫೦-೧೪೫೦ರಲ್ಲಿ ನಿರಣಂ ಕವಿಗಳಲ್ಲಿ ಇಬ್ಬರು ಸಹೋದರರನ್ನೊಳಗೊಂಡ ಹಾಗೂ ಅವರ ಅಣ್ಣನ ಮಗ ಮೂವರು ರಾಮಾಯಣ, ಮಹಾಭಾರತ, ಭಾಗವತ ಮತ್ತು ಗೀತೆಗಳನ್ನು ಆಧರಿಸಿ ಕೃತಿಗಳನ್ನು ರಚಿಸಿದರು. ಗೀತೆಯೇ ಎಲ್ಲಾ ಭಾಷೆಗಳಲ್ಲಿ ಮೊದಲು ಭಾಷಾಂತರವಾಗಿದೆ. ಹದಿನೈದನೇ ಶತಮಾನದಲ್ಲಿ 'ಚೆರುಸ್ಸೇರಿಯು' ಕೃಷ್ಣನ ಕಥೆಯನ್ನು ಹೇಳಲು ಭಾಗವತವನ್ನು ಬಳಸಿಕೊಂಡನು. ಮಹಾಕಾವ್ಯ, ಪುರಾಣ, ಸಂಸ್ಕೃತದ ನೀತಿ ಕಥೆಗಳು, ನೀತಿ ಬೋಧಕ ಪದ್ಯಗಳು, ಮಲೆಯಾಳಂ ನಲ್ಲಿಯೇ ಬರೆಯಲ್ಪಟ್ಟಿದ್ದನು ಕಾಣುತ್ತೇವೆ.

ಯೂರೋಪ್ ನಲ್ಲಿ ನಾಟಕದ ಮೂಲ ಪವಾಡ ನಾಟಕದ ಆಧಾರದ ಮೇಲೆ ಪ್ರಾರಂಭವಾದಂತೆ ಇಲ್ಲಿಯೂ ಅದನ್ನೇ ಕಾಣಬಹುದು. ದುರ್ಗಿಯು ಧಾರುಕನನ್ನು ಕೊಲ್ಲುವ ಕೃತಿಯನ್ನೋದಿ ರಚಿತವಾದ ಪದ್ಯ ಇದೆ. ಮೂಲವನ್ನು ಹೊಂದಿದ್ದಾಗಿದೆ. ಮುಂದೆ ಅದು ರೂಪಾಂತರ ಹೊಂದಿ ಕಥಕಳಿಯಲ್ಲಿ ಪರ್ಯಾವಸಾನ ಹೊಂದಿತು. ೧೯ನೇ ಶತಮಾನದಲ್ಲಿ ಕೋಯಿಲ್ ತುಂಬುರಾನ್ ಎಂಬ ಕವಿಯು ಸಂಸ್ಕೃತ ಶಾಕುಂತಲ ನಾಟಕವನ್ನು ಮಲೆಯಾಳಂಗೆ ಅನುವಾದಿಸಿದನು.

ಈ ತೆರನಾಗಿ ಮಲೆಯಾಳಂನಲ್ಲಿಯೂ ಮೊದಲು ಸಂಸ್ಕೃತದಿಂದ ನಂತರ, ಇಂಗ್ಲಿಷ್, ಹಿಂದಿ, ಬಂಗಾಳಿ, ಮರಾಠಿ, ತಮಿಳು, ತೆಲುಗು ಮುಂತಾದ ಭಾಷೆಗಳಿಂದ ಅನುವಾದ, ರೂಪಾಂತರಗಳ ಮೂಲಕ ಭಾಷಾಂತರ ಬೆಳೆದು ಬಂದಿರುವುದು ಗೋಚರಿಸುತ್ತದೆ.

ಈ ಮೇಲಿನ ಎಲ್ಲಾ ಭಾರತೀಯ ಭಾಷೆಗಳಲ್ಲಿ ಗಮನಿಸುವುದಾದರೆ ಭಾಷಾಂತರದ ಬೆಳವಣಿಗೆಯು ಮೊದಲು ಸಂಸ್ಕೃತದ ರಾಮಾಯಣ, ಮಹಾಭಾರತ, ಭಾಗವತಗಳು ಭಾಷಾಂತರಗೊಂಡಿರುವುದನ್ನು ಕಾಣಬಹುದು. ಹಾಗೆ ಮುಂದುವರೆದಂತೆ, ಭಾರತೀಯ ಅನ್ಯಭಾಷೆಗಳಾದ ತಮಿಳು, ತೆಲುಗು, ಮಲೆಯಾಳಂ, ಮರಾಠಿ, ಬಂಗಾಲಿ, ಸಂಸ್ಕೃತ ಭಾಷೆಗಳು ಪರಸ್ಪರ ಕೊಟ್ಟು ತೆಗೆದುಕೊಳ್ಳುವ ಪ್ರಕ್ರಿಯೆಯಲ್ಲಿ ತೊಡಗಿರುವುದನ್ನು ಕಾಣಬಹುದು. ಅಷ್ಟೇ ಅಲ್ಲದೆ ಪಾಶ್ಚಾತ್ಯ ಭಾಷೆಗಳಿಂದಲೂ ಕೊಟ್ಟು-ತೆಗೆದುಕೊಳ್ಳುವ ಭಾಷಾಂತರ ಪ್ರಕ್ರಿಯೆ ಜರುಗಿರುವುದನ್ನು ಕಾಣಬಹುದು. ಈ ಮೂಲಕ ಭಾರತದಲ್ಲಿ ಭಾಷಾಂತರದ ಬೆಳವಣಿಗೆಯು ಪ್ರಾಚೀನ ಕಾಲದಿಂದಲೂ ನಿರಂತರವಾಗಿ ಬೆಳೆಯುತ್ತ ಬಂದಿರುವುದನ್ನು ಕಾಣುತ್ತೇವೆ. ಡಿ.ವಿ.ಜಿ.ಅವರೇ ಹೇಳಿದಂತೆ, “ಸ್ವಾತಂತ್ರ್ಯ ಕಾವ್ಯದ ಪೈರು ಹುಟ್ಟುವುದಕ್ಕೆ ಮೊದಲು ನಡೆದಿರಬೇಕಾದ ಉಳಿಮೆಯ ಕೆಲಸವೇ ತರ್ಜುಮೆ” ಎಂಬುದು ಸ್ಪಷ್ಟವಾಗುತ್ತದೆ.

### ಕನ್ನಡದಲ್ಲಿ ಭಾಷಾಂತರದ ಬೆಳವಣಿಗೆ

ಇಂಗ್ಲಿಷ್‌ನಂತೆ ಮುಂದುವರಿದ ಭಾಷೆಗಳಿಗೆ ಹೋಲಿಸಿದರೆ ಕನ್ನಡದಲ್ಲಿ ನಡೆದಿರುವ ಭಾಷಾಂತರ ಕಾರ್ಯ ಬಹಳ ಕಡಿಮೆ. ಇಲ್ಲಿ ಕೂಡ ಈ ಕ್ಷೇತ್ರದಲ್ಲಿ ಸ್ವಲ್ಪ ಮಟ್ಟಿಗೆ ಕೆಲಸ ನಡೆದಿದೆ. ಕನ್ನಡದಲ್ಲೂ ಭಾಷಾಂತರವನ್ನು ಕನ್ನಡ ಭಾಷೆಯ ಉಗಮದ ಜೊತೆ ಜೊತೆಗೆ ನೋಡಬಹುದು. ಕನ್ನಡದ ಮೊದಲ ಪದ ಎಂದು ಗುರುತಿಸಲಾಗಿರುವ ‘ಇಸಿಲ’ ಎಂಬ ಪದ ಕ್ರಿ.ಪೂ.೩ನೇ ಶತಮಾನದಲ್ಲಿ ಅಶೋಕನ ಬ್ರಹ್ಮಗಿರಿ ಶಾಸನದಲ್ಲಿ ದೊರೆತಿದೆ. ಇದು ಸ್ಥಳನಾಮದ ಹೆಸರು. ‘ಇಸಿಲ’ವು ನಿಶ್ಚಿತವಾಗಿಯೇ ಕನ್ನಡ ಪದ ಮತ್ತು ಅದು ಬಾಣಪ್ರಯೋಗ ಮಾಡು ಎಂಬರ್ಥದ ‘ಎಮ್’ ಅಥವಾ ‘ಎಸು’ ಎಂಬ ಧಾತುವಿನಿಂದ ನಿಷ್ಪನ್ನವಾಗಿದೆ. ಇಸಿಲ ಎಂದರೆ ಬಾಣ ಬಿಡುವ ಜಾಗ ಅಥವಾ ಕೋಟೆಯಿಂದ ಆವೃತವಾಗಿದ್ದ ಒಂದು ಪಟ್ಟಣವಿರಬೇಕು ಎಂದು ಪ್ರೊ.ಡಿ.ಎಲ್.ನರಸಿಂಹಾಚಾರ್ಯರು ಹೇಳಿದ್ದಾರೆ.[೨೨]

ಕ್ರಿ.ಶ.೨ನೇ ಶತಮಾನಕ್ಕೆ ಸೇರಿದ ಗ್ರೀಕ್ ಪ್ರಹಸನದಲ್ಲಿ ಕನ್ನಡ ಪದಗಳು ದೊರೆಯುತ್ತವೆ ಎಂದು ಗೋವಿಂದ ಪೈರವರು ಸಂಶೋಧನೆ ಮೂಲಕ ತೋರಿಸಿಕೊಟ್ಟಿದ್ದಾರೆ. ಗ್ರೀಕ್ ಪ್ರಹಸನದಲ್ಲಿ ದೊರೆಯುವ ಕನ್ನಡ ಪದಗಳೆಂದರೆ Bas, ouamesare, ] albatta, Malpiniak ಇತ್ಯಾದಿ. ಗೋವಿಂದ ಪೈ ಅವರ ಸಂಶೋಧನೆಯ ಪ್ರಕಾರ ಗ್ರೀಕ್ ಮೂಲ ಪ್ರತಿಯಲ್ಲಿರುವ ‘Bas’ ಎಂಬ ಪಾತ್ರ ಸಂಕೇತವನ್ನು ಅವರ ಸಂಪಾದಕರು ‘Basileus’ ಎಂದರೆ ‘ಅರಸು’ ಎಂದು ಅರ್ಥಮಾಡಿಕೊಂಡು ಈ ಪಾತ್ರವನ್ನು ಅವರು The barbarian king(o.p., ಪು.೪೨) ಎಂದೂ Greek-speaking king ಎಂದು ಹೇಳಿರುವರು.

ಅಂದರೆ ಗೋವಿಂದಪೈರವರು 'Bas' ಎಂಬ ಗ್ರೀಕ್ ಸಂಕೇತವು 'Basilikos' ಎಂದರೆ 'aprincely person, a courtier, a nobleman' ಎಂಬರ್ಥವು ಓಗಾಗಿ 'Bas' ಎಂಬ ಸಂಕೇತದಿಂದ ಸೂಚಿಸಲ್ಪಟ್ಟಿರುವ ಪಾತ್ರವು ಅರಸನಲ್ಲ. 'ಅರಸನ ಕಯ್ಕೆಳಗಣ ನಾಡಗೌಡನೊ', ಇಲ್ಲವೆ 'ಊರಿನ ಯಾವನೊಬ್ಬ ಶ್ರೀಮಂತನೊ' ಆಗಿರಬೇಕು ಎಂದು ಹೇಳುತ್ತಾರೆ. ಹಾಗೆ 'ouamesar' ಎಂಬುದನ್ನು soomesare ಎಂದು ಅರ್ಥ ಮಾಡಿಕೊಂಡು ಅದು 'ಸೋಮೇಶ್ವರ' ಆಗಿರಬೇಕು ಎಂದು ಹೇಳುತ್ತರೆ. ಇನ್ನು |albatta ಎಂಬ ಪದವನ್ನು ಕುರಿತು ಈ albatta ಎಂಬುದರ ಮುಂದೆ ] ಈ ಬಗೆಯ ಆವರಣವನ್ನು ಹಾಕಿರುವುದರಿಂದ ಆ ಶಬ್ದದ ಆಧ್ಯಕ್ಷರವೊಂದು ಯಾವುದೆಂದು ತಿಳಿಯುವುದಿಲ್ಲ ಎಂದು ನಿರ್ದಿಷ್ಟವಾಗುತ್ತದೆ. ಇದರಿಂದ ನನಗೆ ತೋರುವುದೇನೆಂದರೆ, ಈ ಪೂರ್ವಶಬ್ದವು 'galbatta' ಎಂದಿರಬೇಕು 'galbatta'(ಗಲ್ಬತ್ತ) ಎಂದರೆ ಪರ್ಶಿ (parsia) ಭಾಷೆಯಲ್ಲಿ 'ಹಡಗು' ಎಂದರ್ಥ. 'ಗಲ್ಬತ್ತ' ಎಂಬ ಈಗಣ ಪಾರ್ಶಿಭಾಷೆಯಲ್ಲಿ ತುಂಬ ವ್ಯವಹಾರದಲ್ಲಿರುವ ಮತ್ತು ಅದೇ ಭಾಷೆಯಿಂದ ಈಗ ನಮ್ಮ ಕರಾವಳಿ ಜಿಲ್ಲೆಯಲ್ಲಿಯೂ ವ್ಯವಹಾರಿಕವಾಗಿರುವ ಈ ಶಬ್ದವು ಬಹುಶಃ ಕನ್ನಡ (ಅಥವಾ ತುಳು) ಭಾಷೆಯ ಶಬ್ದಗಳಾಗಿರುವ 'ಗಾಳಿ+ಪಾತಿ' (ಗಾಳಿಯ ಹಡಗು) ಎಂಬುದರಿಂದ ಉಂಟಾಗಿ, ಇಲ್ಲಿಂದಲೇ ಪರ್ಶಿಸ್ಥಾನಕ್ಕೆ ಹೋಗಿ ಅಲ್ಲಿ 'ಗಲ್ಬತ್ತ' ಎಂದು ರೂಪಾಂತರಿಸಿರಬೇಕೆಂದು ನನಗೆ ಕಾಣುತ್ತದೆ ಎಂದು ಹೇಳುತ್ತಾರೆ ಹಾಗೂ 'Malpiniak'(ಬಂ.೮೧) ಎಂಬ ಈ ಶಬ್ದಕ್ಕೆ, M.A.R ನಲ್ಲಿ 'ಮಲ್ಪಿನಾಯಕ' ಎಂದರೆ 'ಮಲ್ಪೆಯ ಅರಸು' ಎಂದು ಅರ್ಥಮಾಡಿಕೊಳ್ಳಬಹುದು. ಆದರೆ ಇನ್ನು ಇದರಲ್ಲಿ ಸಂಶಯವಿದೆ. ಸಂಶೋಧನೆ ಆಗಬೇಕು ಎಂದು ಹೇಳುತ್ತಾರೆ.[೨೩]

ಈ ಮೇಲಿನ ಅಂಶಗಳನ್ನು ಸಂಗತಿಗಳನ್ನು ಗಮನಿಸಿದಾಗ ಕನ್ನಡದ ಒಂದು ಪದ ಇನ್ನೊಂದು ಭಾಷಿಕ ಜಗತ್ತಿಗೆ ಪ್ರವೇಶ ಪಡೆದಿದೆ ಎಂಬುದೇ ಒಂದರ್ಥದಲ್ಲಿ ಭಾಷಾಂತರವಾಗುತ್ತದೆ. ಏಕೆಂದರೆ ಭಾಷಾಂತರ ಪ್ರಕ್ರಿಯೆಯಲ್ಲಿ ಒಂದು ಪದವನ್ನು ಯಥಾವತ್ತಾಗಿ ಬಳಸಿಕೊಳ್ಳುವ ಸಾಧ್ಯತೆಗಳನ್ನು ಸ್ವೀಕರಿಸಲಾಗಿದೆ. ಉದಾ.ಇಂಗ್ಲಿಷ್‌ನಿಂದ ಕನ್ನಡಕ್ಕೆ ಭಾಷಾಂತರವಾದಾಗ ಹೇಗೆ ನಾವು ಕೆಲವು ಪದಗಳನ್ನು ಹಾಗೆ ಉಳಿಸಿಕೊಳ್ಳುವ ಸಾಧ್ಯತೆಯ ಬಗ್ಗೆ ಚರ್ಚಿಸುತ್ತೇವೆಯೋ ಹಾಗೆ ಕನ್ನಡದ ಭಾಷಾಂತರ ಪ್ರಕ್ರಿಯೆಯನ್ನು ಕ್ರಿ.ಪೂ.೩ನೇ ಶತಮಾನದಿಂದಲೇ ಆರಂಭವಾಗಿರಬಹುದು ಎಂದು ಚರ್ಚಿಸಬಹುದಾಗಿದೆ. ಕನ್ನಡ ಶಾಸನಗಳಲ್ಲಿ ಭಾಷಾಂತರ ಪ್ರಕ್ರಿಯೆ ನಡೆದಿದ್ದು, ಶಾಸನಗಳಲ್ಲಿ ಭಾಷಾಂತರ ಎಂಬ ವಿಷಯ ಕುರಿತು ಪ್ರತ್ಯೇಕವಾದ ಸಂಶೋಧನೆ ಕೈಗೊಳ್ಳುವ ಸಾಧ್ಯತೆಗಳು ಇದೆ. ಇದರಿಂದ ಕನ್ನಡದಲ್ಲಿ ಭಾಷಾಂತರ ಚರಿತ್ರೆ ಪ್ರಾಚೀನವಾಗುತ್ತ ಇನ್ನೂ ಸ್ಪಷ್ಟವಾಗುತ್ತದೆ. ಅಲ್ಲದೆ ಕನ್ನಡದ ಮೊಟ್ಟಮೊದಲನೆಯ ಗದ್ಯಗ್ರಂಥವಾದ ವಡ್ಡಾರಾಧನೆಯನ್ನು(೯೦೦) ಕುರಿತು ಸಂಶೋಧನೆ ಕೈಗೊಂಡ ಗೋವಿಂದ ಪೈಯವರು ವೊಡ್ಡಾರಾಧಣ ಮೂಲತಃ ಸಂಸ್ಕೃತವಲ್ಲವೆಂದೂ ಪ್ರದ್ಯಕ್ಷವಿರುವ ಈ ಗ್ರಂಥದ ಸದ್ಯಕ್ಕೆ ಪ್ರಕಟವಾದ ಈ ಮೂರು ಕಥೆಗಳಲ್ಲಿ 'ಸಾವಿರ ದಿನಾರಮಂ 'ಸೋಲ್ತು' (ಪು.೧೯೦) 'ಸಾವಿರ ದೀನಾರದ ಪೊಟ್ಟಳಿಗೆ' (ಪು.೧೯೧.

೧೯೩, ೧೯೪) ಹಾಗೂ 'ಒಂದು ದಮ್ಮಕ್ಕಾದೊಡಂ ಸೀರೆಯಂ ಕುಡಿಯಿಮೆಂದು' (ಪು.೨೦೮), 'ಎಂಟು ದಮ್ಮದ ಪುಳ್ಳಿಮಂತಂದು' (ಪು.೨೦೮) ಎಂಬಲ್ಲಿ ರೋಮಿಯರ (Romans), ದೀನಾರ (denarius) ಮತ್ತು ಗ್ರೀಕರ (Greaks) ದ್ರಮ್ಮ(drachma) ಎಂಬ ನಾಣ್ಯಗಳ ಹೆಸರಿವೆ. ಈ ವಿದೇಶಿಯ ಹೆಸರಿನ ದೇಶಿಯ ನಾಣ್ಯಗಳು ಉತ್ತರ ಪಥದಲ್ಲಿ ವ್ಯವಹಾರಿಕವಾಗಿ ಚಲಾವಣೆಯಲ್ಲಿದ್ದ ಕಾರಣ ಈ ಗ್ರಂಥವು ಮೂಲತಃ ಕನ್ನಡವೂ ಅಲ್ಲ ಕರ್ನಾಟಕದಲ್ಲಿ ರಚಿತವಾದದ್ದೂ ಅಲ್ಲ ಉತ್ತರ ಪಥದ ಯಾವೊಂದು ಪ್ರಾಕೃತ ಭಾಷೆಯ ಮೂಲ ಗ್ರಂಥದಿಂದ ಕನ್ನಡಿಸಲ್ಪಟ್ಟಿರಬೇಕೆಂದು ನಿಷ್ಪನ್ನವಾಗುತ್ತದೆ. ಈ ಅಂಶವನ್ನು ಗಮನಿಸಿದರೆ ಕನ್ನಡದಲ್ಲಿ ದೊರೆತ ಸಾಹಿತ್ಯ ಗ್ರಂಥದಲ್ಲಿ ಮೊಟ್ಟಮೊದಲಿಗೆ ಭಾಷಾಂತರಿಸಲ್ಪಟ್ಟ ಸಾಹಿತ್ಯಿಕ ಗದ್ಯಕೃತಿ ವಡ್ಡಾರಾಧನೆ ಯಾಗುತ್ತದೆ.[೨೨]

ಕನ್ನಡದ ಮೊದಲ ಅನುವಾದಗಳು ನೇರ ಭಾಷಾಂತರಗಳಾಗಿರಲಿಲ್ಲ. ಸಂಸ್ಕೃತ, ಪ್ರಾಕೃತ ಕೃತಿಗಳ ರೂಪಾಂತರಗಳಾಗಿದ್ದವು. ಪಂಪನ 'ವಿಕ್ರಮಾರ್ಜುನವಿಜಯ', ನಾಗವರ್ಮನ 'ಕರ್ನಾಟಕ ಕಾದಂಬರಿ', ನಾರಾಣಪ್ಪನ 'ಕರ್ನಾಟಕ ಭಾರತ ಕಥಾಮಂಜರಿ', ನರಹರಿಯ 'ತೊರವೆ ರಾಮಾಯಣ' ಮುಂತಾದವುಗಳನ್ನೆಲ್ಲ ಈ ಸಾಲಿಗೆ ಸೇರಿಸಬಹುದೆಂದು ತೋರುತ್ತದೆ. ಇವುಗಳನ್ನು ಕೀರ್ತಿನಾಥ ಕುರ್ತಕೋಟಿಯವರು 'ಪುರ್ನಲೇಖ' ಎಂದು ಕರೆದಿದ್ದಾರೆ. ಇನ್ನು ಕೆಲವರು ಇದನ್ನು ಭಾಷಾಂತರ ಕೃತಿಗಳೆಂದು ಒಪ್ಪದೆ ಇವು ಸ್ವತಂತ್ರ ಕೃತಿಗಳು ಎಂದು ವಾದಿಸುತ್ತಾರೆ. ಆದುದರಿಂದ 'ಮಹಾಲಿಂಗರಂಗನ' "ಅನುಭವಾಮೃತ"ವು ವಿವೇಕಸಿಂಧೂ ಎಂಬ ಮರಾಠಿ ಕೃತಿಯೊಂದರ ನೇರ ಅನುವಾದವೆಂದು ತಿಳಿದಿದ್ದು, ಕನ್ನಡದಲ್ಲಿ ಬಂದ ನೇರ ಭಾಷಾಂತರಗಳಲ್ಲಿ ಬಹುಶಃ ಇದೇ ಮೊದಲನೆಯದು.

ಹರಿಹರ ಬರುವವರೆಗೆ ಸಂಸ್ಕೃತ ಸಾಹಿತ್ಯ ಕನ್ನಡಕ್ಕೆ ಗಣಿಯೆನಿಸಿದ್ದಿತು. ಅಲ್ಲಿಯ ಕೃತಿಗಳನ್ನವಲಂಬಿಸಿ ಭಾಷಾಂತರ, ಸೃಜನಶೀಲ ಭಾಷಾಂತರ, ರೂಪಾಂತರ ರೀತಿಯ ಕಾವ್ಯಗಳು ನಮ್ಮಲ್ಲಿ ಹುಟ್ಟಿಬಂದವು. ಹರಿಹರ ಆರ್ಯಮೂಲದ ಸಂಸ್ಕೃತ ಆಕರಕ್ಕೆ ವಿದಾಯ ಹೇಳುವ ರೀತಿಯಲ್ಲಿ ಪುರಾತನರ ರಗಳೆಗಳಿಗಾಗಿ ದ್ರಾವಿಡ ಮೂಲದ ತಮಿಳು ಆಕರವನ್ನು ಅಸಂಖ್ಯಾತರ ರಗಳೆಗಳಿಗಾಗಿ ಕನ್ನಡ ಮೂಲದ ವಚನ ಆಕರವನ್ನು ಅವಲಂಬಿಸಿದನು. ಪುರಾತನರನ್ನು ಕುರಿತು ಪ್ರಾಚೀನ ತಮಿಳು ಕೃತಿಗಳು ಸುಂದರಮೂರ್ತಿಯ (ನಂಬಿಯಣ್ಣ ೯ನೆಯ ಶತಮಾನ) "ತಿರುತ್ತೊಂಡತ್ತೊಗೈ" ಮತ್ತು ನಂಬಿಯಂಡಾರ ನಂಬಿಯ (೧೧ನೆಯ ಶತಮಾನ) "ತಿರುತ್ತೊಂಡರ್ ತಿರುವಂದಾದಿ" ಇವುಗಳನ್ನು ಆಧಾರವಾಗಿಟ್ಟುಕೊಂಡು ಹುಟ್ಟಿದ ಕೃತಿ ಶೇಕ್ಕಿಳಾರನ "ಪೆರಿಯಪುರಾಣಂ". ಈ ತಮಿಳಿನ ಮೂರು ಕೃತಿಗಳನ್ನು, ಕೊನೆಯ ಪಕ್ಷ ಪೆರಿಯ ಪುರಾಣವನ್ನು ಹರಿಹರ ಆಧರಿಸಿರುವನೆಂದು ವಿದ್ವಾಂಸರು ಹೇಳುತ್ತಾರೆ. ಇದನ್ನು ಕಥನಕ್ರಮ, ಘಟನೆ, ವಾಕ್ಯ, ಶಬ್ದಗಳ ಸಾಮ್ಯದಿಂದ ಇವರು ತೋರಿಸಿಕೊಟ್ಟಿದ್ದಾರೆ. ಸಾಲದುದಕ್ಕೆ ತಮಿಳು ತೇವಾರಂಗಳನ್ನು ಹರಿಹರ ಬಳಸಿಕೊಂಡಂತಿದೆ. ಹೀಗಿದ್ದೂ ಅನೇಕ ಕಡೆಗಳಲ್ಲಿ ಪುರಾತನರ ಚರಿತ್ರೆಯ ಕೆಲವು ಘಟನೆಗಳನ್ನು, ಅಲ್ಲಿಯ ಕೆಲವು ಅಂಕಿತಗಳನ್ನು ಕೈ ಬಿಡುತ್ತಾನೆ. ಹರಿಹರ ಇದಕ್ಕೆ ಕಾರಣ ತಮಿಳು ನೆಲಕ್ಕೆ ನಿಷ್ಠವಾಗಿರುವ

ಪುರಾತನರ ಕಥೆಗಳು ಆ ಸಂಬಂಧವನ್ನು ಕಳಚಿಕೊಂಡು, ಮೂಲಕ್ಕೆ ಸಂಪೂರ್ಣ ನಿಷ್ಠವಾಗಿರದೆ, ರೂಪಾಂತರದ ಮೂಲಕ ಕನ್ನಡ ನೆಲಕ್ಕೆ ಹತ್ತಿರವಾಗಲಿ ಎಂಬ ಉದ್ದೇಶವಿರುವಂತಿದೆ. ಇದನ್ನು ಗಮನಿಸಿದರೆ ಹರಿಹರನ ಭಾಷಾಂತರದ ಸ್ವರೂಪ ಯಾವ ರೀತಿಯದು ಎಂಬುದು ತಿಳಿದುಬರುತ್ತದೆ. ಭಾಷಾಂತರ ಕುರಿತು ಆಗಲೇ ಅವನು ಚಿಂತನೆ ನಡೆಸಿರುವುದು ಕಂಡುಬರುತ್ತದೆ.[೨೫]

ಪ್ರಾಚೀನ ಕವಿಗಳೆಲ್ಲ ಉಭಯ ಭಾಷಾ ವಿಶಾರದರು. ತಾವು ಒಂದು ಭಾಷೆಯಲ್ಲಿ ಓದಿದ ಕೃತಿಯನ್ನು ಇನ್ನೊಂದು ಭಾಷೆಯಲ್ಲಿ ಪುನರ್‌ಸೃಷ್ಟಿಸಿ ಬರೆಯುವ ಪ್ರಕ್ರಿಯೆಯು ಅನುವಾದದ ಮೂಲದಿಂದಲೇ ಜನ್ಯವಾದುದು. ಮೂಲಕೃತಿಯ ವಸ್ತುವನ್ನು ಆಯ್ದು ಅದನ್ನು ಹಿಗ್ಗಿಸುವ, ಕುಗ್ಗಿಸುವ ವಿಸ್ತರಿಸುವ ಸ್ವಾತಂತ್ರ್ಯವನ್ನು ನಮ್ಮ ಕವಿಗಳು ವಹಿಸಿದ್ದಾರೆ. ಆದರೆ ಒಂದು ಕೃತಿಯನ್ನು ಓದಿ ಅದೇ ಭಾಷೆಯಲ್ಲಿ ಬರೆಯುವ ಗೋಜಿಗೆ ಹೋಗಲಿಲ್ಲ. ಬದಲಿಗೆ ಮೂಲ ಕೃತಿಯದಲ್ಲದ ಭಾಷೆಯಲ್ಲಿ ಬರೆಯುವ ಹಂಬಲವೇ ಅನುವಾದದ ನೆಲೆಯಿಂದ ಹೊರ ಹೊಮ್ಮಿರಬೇಕೆಂದೆನಿಸುತ್ತದೆ. ಪ್ರಾಚೀನ ಕವಿಗಳಿಗೆ ಸಂಸ್ಕೃತ, ಪ್ರಾಕೃತ, ಕೃತಿಗಳ ವಸ್ತುಮುಖ್ಯವೆನಿಸಿತೇ ವಿನಾ ಬರವಣಿಗೆಯ ವಿಧಾನವಾಗಲಿ, ಸ್ವರೂಪವಾಗಲಿ ಅಲ್ಲ.

ಕನ್ನಡ ಭಾಷೆಯು ಕಾಲಗತಿಗೆ ಅನುಗುಣವಾಗಿ ಸಂಸ್ಕೃತ, ಪ್ರಾಕೃತಗಳೊಂದಿಗೆ ಬ್ರಿಟಿಷರ ಆಳ್ವಿಕೆ ಯಿಂದಾಗಿ, ಮತ್ತು ಫ್ರೆಂಚರು, ಡಚ್ಚರು, ಅರೇಬಿಕ್, ಪಾರ್ಸಿಯರ ಆಗಮನದಿಂದಾಗಿ, ಈ ಎಲ್ಲಾ ಭಾಷೆಗಳು ಕನ್ನಡದ ಜನಜೀವನದಲ್ಲಿ ಹಾಸುಹೊಕ್ಕಾಗಿದ್ದರಿಂದ ಆ ಭಾಷೆಯ ಹಲವಾರು ಶಬ್ದಗಳನ್ನು ಸ್ವೀಕರಿಸುವುದರ ಮೂಲಕ (ಅನ್ಯಭಾಷೆ ಪದಗಳು) ಅವು ಕನ್ನಡದ ಪದಗಳೇ ಎನ್ನುವಂತೆ ಬೆರೆತುಕೊಂಡಿವೆ. ಉದಾ : ಬ್ಯಾಂಕ್, ಕಛೇರಿ, ಬಾಂಬ್, ಜವಾನ, ನವಾಬ, ಮಸೀದಿ, ರಸೀದಿ, ಅರ್ಜಿ, ಟಪಾಲು, ಬುಕ್, ಪೆನ್, ಪೇಟ, ಚರ್ಚ್, ರುಮಾಲು, ದರ್ಜಿ, ಬೀನ್ಸ್, ಕ್ಯಾರೇಟ್ ಮುಂತಾದ ಅನ್ಯದೇಶ್ಯ, ಅನ್ಯಭಾಷಾ ಪದಗಳನ್ನು ಸ್ವೀಕರಿಸುವ ಮೂಲಕ ಭಾಷಾಂತರಿಸುವುದರ ಮೂಲಕ ಕನ್ನಡವು ಆ ಭಾಷೆಗಳಿಂದ ಸಾಕಷ್ಟು ಉಪಕೃತಗೊಂಡಿದೆ.

ಈ ಹಿನ್ನೆಲೆಯಲ್ಲಿ ಹಿಂದಿನ ಪರಂಪರೆಯನ್ನು ಗಮನಿಸಿದಾಗ ಕನ್ನಡ ಸಾಹಿತ್ಯದಲ್ಲಿ ಭಾಷಾಂತರಕ್ಕೆ ಯಾವ ಸ್ಥಾನವಿತ್ತು ಅದಕ್ಕಿಂತ ತೀವ್ರವೇಗವಾಗಿ ಭಾಷಾಂತರವು ಬೆಳವಣಿಗೆ ಹೊಂದುತ್ತಿದೆ ಎಂಬುದು ತಿಳಿದುಬರುತ್ತದೆ. ಇತರ ಭಾಷೆಗಳ ಸಂಪರ್ಕ ಕನ್ನಡಕ್ಕಾದರೂ ಇಂಗ್ಲಿಷ್ ಭಾಷೆಯ ಕೃತಿಗಳ ಭಾಷಾಂತರಗಳಷ್ಟು ಬೇರೆ ಭಾಷೆಯ ಕೃತಿಗಳು ಅನುವಾದಗೊಳ್ಳಲಿಲ್ಲ. ೧೮೧೩ರಲ್ಲಿ 'ಜಾನ್ ಹ್ಯಾಂಡ್ಸ್' ಎಂಬಾತ ಮ್ಯಾಥ್ಯೂ ಮತ್ತು ಲೂಕರ್ ಸುವಾರ್ತೆಗಳನ್ನು ಕನ್ನಡಕ್ಕೆ ಭಾಷಾಂತರಿಸಿದ, ೧೮೨೩ರಲ್ಲಿ ಕೇರಿ ಎಂಬುವನಿಂದ ಬೈಬಲ್ ಅನುವಾದಿಸಲ್ಪಟ್ಟಿತು. ೧೮೪೭ರಲ್ಲಿ ಜಾನ್ ಬುನ್ಯನ್‌ನ Pilgrims progress ಕನ್ನಡದಲ್ಲಿ ಬೆಳಕುಕಂಡಿತು. ಇಂಗ್ಲೀಷ್‌ನಿಂದ ಕನ್ನಡಕ್ಕೆ ಬಂದ ಮೊದಲ ಕಾದಂಬರಿ 'ಡಾನಿಯಲ್

ಡಿಪ್ಫೋನ' ರಾಬಿನ್‌ಸನ್ ಕ್ರೂಸೋ' ಅನುವಾದಕರು ಎಸ್.ವಿ.ಕೃಷ್ಣಸ್ವಾಮಿ ಅಯ್ಯಂಗಾರ್, ವರ್ಷ ೧೮೫೭. ಮೊದಲ ನಾಟಕ ಷೇಕ್ಸಪಿಯರ್‌ನ 'ಒಥೆಲೊ' ಇದನ್ನು 'ಸೂರಸೇನ ಚರಿತೆ' ಎಂಬ ಹೆಸರಿನಲ್ಲಿ ಕನ್ನಡ 'ಶಾಕುಂತಲ' ಖ್ಯಾತಿಯ ಬಸವಪ್ಪ ಶಾಸ್ತ್ರಿಗಳು ಇಂಗ್ಲಿಷ್ ಬಲ್ಲ ವಿದ್ವಾಂಸರೊಬ್ಬರ ನೆರವಿನಿಂದ ಕನ್ನಡಕ್ಕೆ ರೂಪಾಂತರಿಸಿದರು. ಹಾಗೆಯೇ ೧೮೯೫ರಲ್ಲಿ 'ಮ್ಯಾಕ್ ಬೆತ್' ಮತ್ತು ಮಿಡ್‌ಸಮ್ಮರ್ ನೈಟ್ ಡ್ರೀಮ್ಸ್'ಗಳು ಅನುಕ್ರಮವಾಗಿ "ಪ್ರತಾಪರುದ್ರದೇವ" ಮತ್ತು 'ಪ್ರಮೀಳಾರ್ಜುನೀಯ' ಎಂಬ ಹೆಸರುಗಳಲ್ಲಿ ಎಂ.ಎಲ್.ಶ್ರೀಕಂಠೇಶಗೌಡರಿಂದ ರೂಪಾಂತರಿಸಲ್ಪಟ್ಟವು. ಇಂಗ್ಲಿಷ್‌ನಿಂದ ಕವನಗಳನ್ನು ಕನ್ನಡಕ್ಕೆ ಮೊದಲು ಭಾಷಾಂತರಿಸಿದವರು. ಹಟ್ಟಿಯಂಗಡಿ ನಾರಾಯಣರಾಯರು. ಇದು ಕೂಡ ಪ್ರಕಟವಾದದ್ದು ೧೯ನೇ ಶತಮಾನದಲ್ಲೆ ಆಂಗ್ಲ ಕವಿತಾಸಾರ ಎಂಬ ಹೆಸರಿನಲ್ಲಿ.

೨೦ನೇ ಶತಮಾನದ ಮೊದಲ ದಶಕಗಳಲ್ಲಿ ಈ ಕೆಲಸ ಹೆಚ್ಚು ಶೀಘ್ರಗತಿಯಿಂದ ಮತ್ತು ಹೆಚ್ಚು ವ್ಯಾಪಕವಾಗಿ ಮುಂದುವರಿಯಿತು. ಬಿ.ಎಂ.ಶ್ರೀ, ಪಂಜೆಮಂಗೇಶರಾಯರು, ಕ.ವೆಂ.ರಾಘುವಾಚಾರ್, ಅಣ್ಣಾಜಿರಾವ್, ಎಸ್.ಜಿ.ನರಸಿಂಹಾಚಾರ್ ಮೊದಲಾದ ಶ್ರೇಷ್ಠ ಸಾಹಿತಿಗಳು ಕೆಲವು ಅತ್ಯುತ್ತಮ ಅನುವಾದಗಳನ್ನು ನೀಡಿದರು. ೧೯೨೦ರಲ್ಲಿ ಬಿ.ಎಂ.ಶ್ರೀಯವರ 'ಇಂಗ್ಲೀಷ್ ಗೀತೆಗಳು' ಕೃತಿಯಂತೂ ಕಾವ್ಯಾನುವಾದಕ್ಕೆ ಒಂದು ಮೇಲ್ಪಂಕ್ತಿಯನ್ನೇ ಹಾಕಿಕೊಟ್ಟಿತು. ಹಾಗೆಯೇ ಕುವೆಂಪುರವರ 'ಬೊಮ್ಮನಹಳ್ಳಿಯ "ಕಿಂದರಜೋಗಿ", 'ಬಿರುಗಾಳಿ', ಮತ್ತು 'ರಕ್ತಾಕ್ಷಿ'ಗಳು ರೂಪಾಂತರಗಳಿಗೆ ಒಂದು ಮಾದರಿಯಾಗಿ ಪರಿಣಮಿಸಿದವು. ಈ ನಡುವೆ ಬಿ.ವೆಂಕಟಾಚಾರ್ಯರು ಬಂಕಿಮ್ ಚಂದ್ರರ ಬಂಗಾಳಿ ಕಾದಂಬರಿಗಳನ್ನು, ಗಳಗನಾಥರು ಕೆಲವು ಮರಾಠಿ ಕಾದಂಬರಿಗಳನ್ನು ಕನ್ನಡಕ್ಕೆ ಅನುವಾದಿಸಿದರು. ಶ್ರೀನಿವಾಸಚಾರ್ಯರು ಅಲೆಕ್ಸಾಂಡರ್ ಡ್ಯೂಮಾನ 'ಕೌಂಟ್ ಆಫ್ ಮಾಂಟೆ ಕ್ರಿಸ್ಟೊ' ಎಂಬ ಫ್ರೆಂಚ್ ಕೃತಿಯ ಇಂಗ್ಲಿಷ್ ಅನುವಾದವನ್ನು 'ರಾಜಮಲಯಸಿಂಹ' ಎಂಬ ಹೆಸರಿನಲ್ಲಿ ಕನ್ನಡಕ್ಕೆ ರೂಪಾಂತರಿಸಿದರು. ಉಗ್ರಾಣ ಮಂಗೇಶರಾಯರ 'ವಿಧಿಯ ವೈಚಿತ್ರ್ಯ' ವೂ ಅದೇ ಕೃತಿಯ ಸಂಗ್ರಹ ರೂಪಾಂತರ ಎನ್ನಬಹುದು. ವಿಕ್ಟರ್ ಹೂಗೋನ 'ಲೇಮಿಸ ರಾಬ್ಲೆ' ಕಾದಂಬರಿಯೂ 'ಪಾಪಿಯ ಪಾಡು' ಎಂದು ಕನ್ನಡಕ್ಕೆ ಅನುವಾದವಾಯಿತು.

ಈ ತೆರನಾಗಿ ಅಂದು ಬರೀ ಇಂಗ್ಲಿಷ್‌ನಿಂದ ಅಥವಾ ಇಂಗ್ಲಿಷ್‌ನ ಮಧ್ಯವರ್ತಿತನದಲ್ಲಿ ಮಾತ್ರ ಕೃತಿಗಳು ಭಾಷಾಂತರಗೊಳ್ಳುತ್ತಿದ್ದವು. ಆದರೆ ಇಂದು ಇಂಗ್ಲಿಷ್‌ನ ಜೊತೆ ಹಿಂದಿ, ಬಂಗಾಳಿ, ಗುಜರಾತಿ, ಪಂಜಾಬಿ, ಕಾಶ್ಮೀರಿ, ಮರಾಠಿ, ತೆಲುಗು, ಮಲೆಯಾಳಂ, ತಮಿಳು ಇತ್ಯಾದಿ ಭಾರತೀಯ ಭಾಷೆಗಳೊಂದಿಗೆ ಚೀನಿ, ಜಪಾನ್, ಪರ್ಶಿಯಾ, ರಷ್ಯದಂತಹ ಅಂತರಾಷ್ಟ್ರೀಯ, ರಾಷ್ಟ್ರೀಯ ಹಾಗೂ ಪ್ರಾದೇಶಿಕ ಭಾಷೆಗಳಲ್ಲಿ ರಚನೆಗೊಂಡ ಕಥೆ, ಕಾವ್ಯ, ಕಾದಂಬರಿ, ನಾಟಕ ಜೀವನ ಚರಿತ್ರೆ ಮತ್ತು ಪ್ರಬಂಧಗಳು, ಸಾಹಿತ್ಯೇತರ ಕೃತಿಗಳು ಕನ್ನಡಕ್ಕೆ ಭಾಷಾಂತರಗೊಳ್ಳುತ್ತಿವೆ.

ಅನಂತರದ ದಶಕಗಳಲ್ಲಿ ಕನ್ನಡದಲ್ಲಿ ಅನುವಾದ ಸಾಹಿತ್ಯ ಒಂದೇ ಸಮನೆ ಬೆಳೆಯುತ್ತಾ ಬಂದಿದೆ. ನವಕರ್ನಾಟಕ ಪ್ರಕಾಶನ ಸಂಸ್ಥೆಯವರು ಪ್ರಕಟಿಸಿರುವ ೨೫ ಸಂಪುಟಗಳ 'ವಿಶ್ವಕಥಾಕೋಶ'

ಇಂಥ ಅನುವಾದ ಸಾಹಿತ್ಯಕ್ಕೆ ಇತ್ತೀಚೆಗೆ ದೊರೆತಿರುವ ಒಂದು ಕೊಡುಗೆ. ಇದಲ್ಲದೆ ಸಾಹಿತ್ಯ ಕೃತಿಗಳೊಂದಿಗೆ ಸಾಮಾಜಿಕ ಮತ್ತು ಪ್ರಾಕೃತಿಕ ವಿಜ್ಞಾನಗಳಿಗೆ ಸಂಬಂಧಿಸಿದ ಕೃತಿಗಳ ಅನುವಾದಗಳೂ ಈಗ ಆರಂಭವಾಗಿವೆ.

ಹೀಗೆ ಇಂಗ್ಲಿಷ್‌ನಿಂದ ಹಾಗೂ ಇಂಗ್ಲಿಷ್‌ನ್ನು ಮಾಧ್ಯಮ ಭಾಷೆಯಾಗಿ ಬಳಸಿಕೊಂಡು ಹಲವು ಯುರೋಪಿಯನ್ ಕೃತಿಗಳು ಕನ್ನಡಕ್ಕೆ ಬಂದುದರ ದೊಡ್ಡ ಪಟ್ಟಿಯನ್ನೇ ನಾವು ನೀಡಬಹುದಾಗಿದೆ. ಅದರೊಂದಿಗೆ ಇಂತಹ ಭಾರತೀಯ ಭಾಷೆಗಳೊಳಗಿನ ಭಾಷಾಂತರ ಚಟುವಟಿಕೆಯನ್ನು ಗಮನಿಸಬಹುದಾಗಿದೆ.

ಕನ್ನಡದಲ್ಲಿ ಭಾಷಾಂತರದ ಬೆಳವಣಿಗೆಯನ್ನು ಗಮನಿಸಿದಾಗ ನಮಗೆ ತಿಳಿದುಬರುವ ಅಂಶಗಳು ಈ ಕೆಳಗಿನಂತಿವೆ.

೧. ಕನ್ನಡ ಬಹುಪಾಲು ಸ್ವೀಕೃತ ಭಾಷೆಯಾಗಿದೆ.

೨. ಸಂಸ್ಕೃತ ಮತ್ತು ಇಂಗ್ಲಿಷ್‌ಗಳ ಯಾಜಮಾನ್ಯವನ್ನು ಕಾಣಬಹುದು. ಆದರೆ ಪ್ರಾಕೃತವೂ ಗಮನಾರ್ಹವಾದ ಭಾಷಾಂತರದ ಮೂಲ ಭಾಷೆಯಾಗಿದೆ.

೩. ಸಾಹಿತ್ಯದ ಭಾಷಾಂತರಗಳ ಪ್ರಾಬಲ್ಯ ಕಂಡುಬರುತ್ತದೆ.

೪. ಒಂದೇ ಕೃತಿಯನ್ನು ಹಲವರು ಹಲವಾರು ರೀತಿಯಲ್ಲಿ ಭಾಷಾಂತರಿಸಿರುವುದನ್ನು ಕಾಣಬಹುದು.

೫. ಆಧುನಿಕ ಸಂದರ್ಭದಲ್ಲಿ ಇಂಗ್ಲಿಷ್ ಮಧ್ಯವರ್ತಿ ಭಾಷೆಯಾಗಿ ಯಜಮಾನಿಕೆ ನಡೆಸಿರುವುದನ್ನು ಕಾಣಬಹುದು.

೬. ಭಾಷಾಂತರದ ಮೂಲಕವೇ ಕನ್ನಡದಲ್ಲಿ ಪ್ರಾಚೀನ ಹಾಗೂ ಆಧುನಿಕ ಸಾಹಿತ್ಯದ ಉಗಮವಾಗಿರುವುದನ್ನು ಕಾಣಬಹುದು.

**ಅಡಿಟಿಪ್ಪಣಿಗಳು**

೧. ಭಟ್ ಎಸ್.ಆರ್., ೧೯೮೯, **ಭಾಷಾಂತರ ಒಂದು ಕಲಾತ್ಮಕ ಅಭಿವ್ಯಕ್ತಿ**, ಪು.೩

೨. ಪ್ರಧಾನ ಗುರುದತ್ತ, ೧೯೮೯, **ಭಾಷಾಂತರ ಕಲೆ**, ಪು.೬

೩.. Mark Shntle worth, Moira Cowie, 1999, **Dictionary of Translation Studies**, Pp.181

೪. ಕುರ್ತಕೋಟಿ ಕೀರ್ತನಾಥ, ೧೯೯೨, **ಬಯಲು ಆಲಯ**, ಪು.೩೨

೫. ಭಟ್ ಎಸ್.ಆರ್., ೧೯೮೯, **ಪೂರ್ವೋಕ್ತ**, ಪು.೪

೬. ಅದೇ, ಪು.೫

೭. ಕೃಷ್ಣ ಸಿ.ಪಂಡಿತ, ೧೯೯೦, **ಶಾಲೆಗಳಲ್ಲಿ ಕನ್ನಡ ಬೋಧನೆ**, ಪು.೨೮೬-೨೯೭

೮. ಕೃಷ್ಣಮೂರ್ತಿ ಕೆ.(ಅನು), ೧೯೭೪, **ಭಾರತೀಯ ಸಾಹಿತ್ಯ ಚರಿತ್ರೆ**, ಪು.೨೯೭

೯. ಶಾನಭಾಗ ಡಿ.ಎನ್.(ಅನು), ೧೯೮೩, ಭಾರತೀಯ ಸಾಹಿತ್ಯ ಸಂಕಲನ, ಪು.೧೭೫

೧೦. ಅದೇ, ಪು.೧೭೮

೧೧. ಪ್ರಧಾನ ಗುರುದತ್ತ, ೨೦೦೪, ಅನಾವರಣ, ಪು.೩೧

೧೨. ಪ್ರಸಾದ್ ಬಿ.ಎಸ್., ೨೦೦೩, ಪ್ರಮುಖ ಭಾರತೀಯ ಭಾಷೆಗಳು, ಪು.೩೮, ೩೯

೧೩. ಶಾನಭಾಗ ಡಿ.ಎನ್.(ಅನು), ೧೯೮೩, ಪೂರ್ವೋಕ್ತ, ಪು.೧೭೩

೧೪. ಅದೇ, ಪು.೧೭೬

೧೫. ಪ್ರಸಾದ್ ಬಿ.ಎಸ್., ೨೦೦೩, ಪೂರ್ವೋಕ್ತ, ಪು.೪೦

೧೬. ಅದೇ, ಪು.೧೮, ೧೯

೧೭. ಕೃಷ್ಣಮೂರ್ತಿ ಕೆ.(ಅನು), ೧೯೭೪, ಭಾರತೀಯ ಸಾಹಿತ್ಯ ಚರಿತ್ರೆ, ಪು.೨೯೭

೧೮. ಶೇಷಗಿರಿರಾವ್ ಎಲ್.ಎಸ್.(ಸಂ), ೧೯೯೦, ಭಾರತೀಯ ಸಾಹಿತ್ಯ ಸಮೀಕ್ಷೆ, ಪು.೬೬೭

೧೯. ಪ್ರಸಾದ್ ಬಿ.ಎಸ್., ೨೦೦೩, ಪೂರ್ವೋಕ್ತ, ಪು.೨೫, ೨೬

೨೦. ಶಾನಭಾಗ ಡಿ.ಎನ್.(ಅನು), ೧೯೮೩, ಪೂರ್ವೋಕ್ತ, ಪು.೬೯೮

೨೧. ಪ್ರಧಾನ ಗುರುದತ್ತ, ೧೯೮೯, ಪೂರ್ವೋಕ್ತ, ಪು.೨೪

೨೨. ಶೇಷಗಿರಿರಾವ್ ಎಲ್.ಎಸ್.(ಸಂ), ೧೯೯೦, ಪೂರ್ವೋಕ್ತ, ಪು.೧೮

೨೩. ಹೆರೆಂಜ್ ಕೃಷ್ಣಭಟ್(ಸಂ), ೧೯೯೫, ಗೋವಿಂದ ಪೈ ಸಂಶೋಧನಾ ಸಂಪುಟ, ಪು.೬೭

೨೪. ಅದೇ, ಪು.೫೭

೨೫. ಕಲಬುರ್ಗಿ ಎಂ.ಎಂ.(ಸಂ), ೧೯೯೯, ಹರಿಹರನ ರಗಳೆಗಳು, ಪು. xviii

೨೬. ಶಿಕ್ಷಕರು ತರಗತಿಯಲ್ಲಿ ನೀಡಿದ ಮಾಹಿತಿ

೩.

# ಭಾಷಾಂತರ ಕುರಿತ ಚಿಂತನೆಗಳು

ಈ ಹಿಂದಿನ ಅಧ್ಯಾಯದಲ್ಲಿ ಪ್ರಸ್ತುತಪಡಿಸಿರುವಂತೆ ಭಾಷಾಂತರ ಎನ್ನುವುದು ಕೇವಲ ಒಂದು ಭಾಷೆ, ಒಂದು ಪ್ರದೇಶ, ಒಂದು ಕಾಲ ಘಟ್ಟಕ್ಕೆ ಸೀಮಿತವಾಗಿರದೆ ಅದು ಎಲ್ಲಾ ದೇಶ ಭಾಷೆಗಳಲ್ಲೂ ನಡೆಯುವಂತಹ ಪ್ರಕ್ರಿಯೆಯಾಗಿದೆ. ಅಲ್ಲದೆ ಎಲ್ಲಾ ಭಾಷೆಗಳ ಬೆಳವಣಿಗೆಗೆ ಭಾಷಾಂತರ ಒಂದು ಮಾಧ್ಯಮವಾಗಿ ಕೆಲಸ ಮಾಡಿರುವುದನ್ನು ಕಾಣಬಹುದು. ಭಾಷೆ ಭಾಷೆಗಳ ನಡುವೆ ಸಂಬಂಧ ಬೆಸೆಯಲು ಭಾಷಾಂತರ ಒಂದು ಸೇತುವೆಯಾಗಿದೆ. ಈ ಭಾಷಾಂತರ ಕಾರ್ಯ ಇಂದು ನಿನ್ನೆಯದಲ್ಲ, ಬಹು ಪ್ರಾಚೀನವಾದದ್ದು. ಹಲವಾರು ಭಾಷೆಗಳ ಉದಯದೊಂದಿಗೆ ಭಾಷಾಂತರದ ಉದಯವನ್ನು ಕಾಣಬಹುದಾಗಿದ್ದು, ಇಂದು ಅದು ಒಂದು ಅಧ್ಯಯನದ ಶಿಸ್ತಾಗುವ ಮಟ್ಟಿಗೆ ಬೆಳೆದು ನಿಂತಿದೆ.

ಕನ್ನಡದಲ್ಲಿ ಭಾಷಾಂತರ ಪ್ರಕ್ರಿಯೆ ಪ್ರಾರಂಭವಾಗಿದ್ದು ಭಾಷೆಯ ಉಗಮದ ಜೊತೆ ಜೊತೆಗೆ ಎಂದು (ಈ ಹಿಂದಿನ ಅಧ್ಯಾಯ ಎರಡರಲ್ಲಿ ತಿಳಿಸಿದಂತೆ) ಗುರುತಿಸಿದ್ದರೂ, ಕನ್ನಡ ಸಾಹಿತ್ಯದಲ್ಲಿ ಭಾಷಾಂತರ ಪ್ರಾರಂಭವಾದದ್ದು ವಡ್ಡರಾಧನೆ, ಕವಿರಾಜಮಾರ್ಗ, ವಿಕ್ರಮಾರ್ಜುನ ವಿಜಯ ಮತ್ತು ಆದಿಪುರಾಣಗಳು ಸಂಸ್ಕೃತ ಮತ್ತು ಪ್ರಾಕೃತದಿಂದಾದ ಭಾಷಾಂತರಗಳೇ ಎಂದು ಗುರುತಿಸಲಾಗಿದೆ. ಇವುಗಳನ್ನು ಕೀರ್ತಿನಾಥ ಕುರ್ತಕೋಟಿಯವರು 'ಪುನರ್‌ಸೃಷ್ಟಿ'/'ಪುನರ್‌ಲೇಖ' ಎಂದು ಹೇಳಿದ್ದಾರೆ.

ಇಂದು ವೈವಿಧ್ಯತೆಯಿಂದ ಕೂಡಿದ ಭಾಷಾಂತರ ಕಲೆಯು ಕಲೆ ಮತ್ತು ವಿಜ್ಞಾನದ ಬೆಳವಣಿಗೆಗೆ ಹಾಗೂ ಆಧುನಿಕ ಬದುಕಿನಲ್ಲಿ ಪ್ರಮುಖವಾದ ಸ್ಥಾನ ಪಡೆದುಕೊಂಡಿದೆ. ಅದರಲ್ಲೂ ಕನ್ನಡದ ಸಮಾಜ, ಸಂಸ್ಕೃತಿ ಮತ್ತು ಸಾಹಿತ್ಯವನ್ನು ಘಟ್ಟಿಗೊಳಿಸುವಲ್ಲಿ ಭಾಷಾಂತರವೂ ಒಂದು ಪ್ರಮುಖ ಮಾಧ್ಯಮವಾಗಿ ಕಾರ್ಯನಿರ್ವಹಿಸುತ್ತಿದೆ. ಪ್ರಾಚೀನ ಕಾಲದಲ್ಲಿ ಕೇವಲ ಅನುಸೃಷ್ಟಿಯ ಪ್ರಕ್ರಿಯೆಯಾಗಿದ್ದ ಭಾಷಾಂತರವು ಇಂದು ಎಲ್ಲ ವಲಯಗಳಿಗೂ ವಿಸ್ತರಿಸಿದೆ. ಕೇವಲ ಒಂದು ಭಾಷೆಯಿಂದ ಇನ್ನೊಂದು ಭಾಷೆಗೆ ನಡೆಯುವ ಅರ್ಥಾಂತರ ಎಂದು ಸಂಕುಚಿತವಾದ ವ್ಯಾಪ್ತಿ ಭಾಷಾಂತರದ್ದಾಗಿತ್ತು. ಕಾಲಕ್ರಮೇಣ ಭಾಷಾಂತರದ ಅರ್ಥವ್ಯಾಪ್ತಿ ವಿಸ್ತರಿಸುತ್ತ ಬಂದಿದ್ದರಿಂದ ಈ ಕುರಿತು ತೀವ್ರವಾದ ಜಿಜ್ಞಾಸೆ ಆರಂಭಗೊಂಡಿದೆ.

ಇಷ್ಟು ವ್ಯಾಪಕವಾಗಿ ಹರಡಿರುವ ಭಾಷಾಂತರವನ್ನು ಪಾಶ್ಚಾತ್ಯ ದೇಶಗಳಲ್ಲಿ ಚಿಂತನೆಗೊಳಪಡಿಸುತ್ತಿದ್ದು ಹಲವು ಪಾಶ್ಚಾತ್ಯ ಭಾಷಾಂತರ ಅಧ್ಯಯನಕಾರರು ತಮ್ಮದೇ ಆದ ವ್ಯಾಖ್ಯಾನಗಳನ್ನು

ಮುಂದಿರುತ್ತಿದ್ದಾರೆ. ಸಿದ್ಧಾಂತಗಳನ್ನು ತತ್ವಗಳನ್ನು ರೂಪಿಸುತ್ತ ಭಾಷಾಂತರವನ್ನು ಒಂದು ಅಧ್ಯಯನ ಶಿಸ್ತನ್ನಾಗಿ ರೂಪಿಸುತ್ತಿದ್ದಾರೆ.

ಈ ದಿಕ್ಕಿನಲ್ಲಿ ನೋಡುವುದಾದರೆ ಕನ್ನಡದಲ್ಲಿ ಭಾಷಾಂತರ ಕುರಿತು ನಡೆದ ಚಿಂತನೆಗಳು ಅಲ್ಪ. ಅಲ್ಲಲ್ಲಿ ಕೆಲವು ಭಾಷಣಗಳಲ್ಲಿ, ಲೇಖನಗಳಲ್ಲಿ, ಭಾಷಾಂತರಗಳ ಮುನ್ನುಡಿ-ಹಿನ್ನುಡಿಗಳಲ್ಲಿ ಬಿಟ್ಟರೆ ಅದನ್ನ ಜ್ಞಾನಶಾಖೆಯಾಗಿ ನೋಡಿರುವುದು ಕಂಡುಬರುವುದಿಲ್ಲ. ಅಲ್ಲದೆ ಕನ್ನಡದಲ್ಲಿ ನಡೆದಿರುವ ವಿಪುಲ ಭಾಷಾಂತರ ಕ್ರಿಯೆಯಲ್ಲಿ ತೊಡಗಿದ್ದ ಹಲವು ಭಾಷಾಂತರಕಾರರಿದ್ದು, ಸೃಜನಶೀಲ ಲೇಖಕರು ಭಾಷಾಂತರ ಕಾರ್ಯದಲ್ಲಿ ತೊಡಗಿಕೊಂಡಿದ್ದರೂ, ಅವರಾರು ಭಾಷಾಂತರ ಕುರಿತು ಪ್ರತ್ಯೇಕವಾಗಿ ಮಾತನಾಡಿಲ್ಲ. ಅವರೆಲ್ಲ ತಮ್ಮ ಕೃತಿಗಳ ಮುನ್ನುಡಿ, ಬೆನ್ನುಡಿಗಳಲ್ಲಿ ಭಾಷಾಂತರ ಎಂದರೇನು? ತಾವು ಭಾಷಾಂತರ ಮಾಡುವುದರ ಉದ್ದೇಶವೇನು? ತಾವು ಮಾಡುವ ಭಾಷಾಂತರ ಯಾವ ತೆರನಾದದ್ದು? (ಯಾವ ರೂಪದ್ದು), ಈ ಭಾಷಾಂತರದಿಂದ ತಮಗಾದ ಅನುಭವವೇನು? ಮುಂತಾದ ವಿಚಾರಗಳನ್ನು ವೈಯಕ್ತಿಕ ನೆಲೆಯಲ್ಲಿ ತಿಳಿಸಿರುವುದನ್ನು ಕಾಣಬಹುದು.

ಆದರೆ ಜಾಗತೀಕರಣ ಸಂದರ್ಭವು ಜಗತ್ತನ್ನೊಂದು ಹಳ್ಳಿಯಾಗಿಸುತ್ತಿರುವ ಸಂದರ್ಭದಲ್ಲಿ ಭಾಷಾಂತರದ ಅಗತ್ಯವನ್ನು ಹೆಚ್ಚು ಗಂಭೀರವಾಗಿ ಪರಿಭಾವಿಸುತ್ತಿದೆ. ಮಾಹಿತಿ ಕ್ಷೇತ್ರದಲ್ಲಿನ ಕ್ರಾಂತಿಯೆಂಬುದು ಎಲ್ಲ ಭಾಷೆಗಳಿಗೂ ಮಾಹಿತಿಯನ್ನು ರವಾನಿಸುವ ಧ್ಯೇಯವೊಂದನ್ನು ಹೊಂದಿದ್ದು, ಅದಕ್ಕಾಗಿ ಹೆಚ್ಚು ಹೆಚ್ಚು ಭಾಷಾಂತರ ಚಟುವಟಿಕೆ ನಡೆಯಬೇಕಿದೆ. ಅಂತೆಯೇ ಈ ಭಾಷಾಂತರ ಸಂದರ್ಭದಲ್ಲಿ ಕೊಡುವ ಹಾಗೂ ಸ್ವೀಕರಿಸುವ ಭಾಷೆಗಳೆರಡೂ ತಮ್ಮನ್ನು ಭಾಷಾಂತರಕ್ಕೆ ಅನುವು ಮಾಡಿಕೊಳ್ಳಬೇಕಿದೆ. ಅದಕ್ಕಾಗಿ ಭಾಷಾಂತರದ ಪ್ರಕ್ರಿಯೆಯನ್ನು ವೈಜ್ಞಾನಿಕಗೊಳಿಸಿಕೊಳ್ಳುವ, ಸೈದ್ಧಾಂತಿಕವಾಗಿ ಸ್ಪಷ್ಟಪಡಿಸಿಕೊಳ್ಳುವ ಅಗತ್ಯ ಇಂದು ಹೆಚ್ಚಿನದಾಗಿದೆ.

ಕನ್ನಡದ ಸಂದರ್ಭವಾದರೂ ಬರಲಿರುವ ಭಾಷಾಂತರ ಪ್ರವಾಹಕ್ಕಾಗಿ ತನ್ನನ್ನು ತಾನು ಸಿದ್ಧಪಡಿಸಿಕೊಳ್ಳಬೇಕಿದೆ. ತನಗೆ ಬೇಕಾದ ಭಾಷಾಂತರ ಯಾವ ರೀತಿಯದು? ಅದರ ಸ್ವರೂಪವೇನಾಗಿರಬೇಕು ಇತ್ಯಾದಿ ಪ್ರಶ್ನೆಗಳನ್ನು ಸ್ಪಷ್ಟಪಡಿಸಿಕೊಳ್ಳಬೇಕಾಗಿದೆ. ಇಲ್ಲದೆ ಹೋದರೆ ತನ್ನ ಅಗತ್ಯಕ್ಕಿಂತ ಹೆಚ್ಚಾಗಿ ಯಜಮಾನ ಭಾಷೆಗಳ ಅಭಿರುಚಿ ಅಗತ್ಯಕ್ಕೆ ತನ್ನನ್ನು ಒಡ್ಡಿಕೊಳ್ಳುವ ಮೂಲಕ ಇನ್ನೊಂದು ಬಗೆಯ ದಾಸ್ಯಕ್ಕೆ ಒಳಗಾಗಬೇಕಾಗುತ್ತದೆ. ಈ ಅಪಾಯದಿಂದ ಪಾರಾಗಲು ತನ್ನ ಸೈದ್ಧಾಂತಿಕತೆ, ರಾಜಕೀಯ ಅಗತ್ಯಗಳನ್ನು ಖಚಿತಪಡಿಸಿಕೊಳ್ಳಬೇಕಾಗಿದೆ. ಈ ಗುರುತಿಸುವಿಕೆಗೆ ಈವರೆಗೆ ನಡೆದಿರುವ ಭಾಷಾಂತರಗಳು ಹಾಗು ಆ ಕುರಿತ ತನ್ನ ಹಿಂದಿನವರ ಒಲವು-ನಿಲುವುಗಳನ್ನು ಅರ್ಥಮಾಡಿಕೊಳ್ಳುವ ಅಗತ್ಯವಿದೆ. ಈ ಹಿನ್ನೆಲೆಯಲ್ಲಿ ಕೈಗೆತ್ತಿಕೊಳ್ಳಲಾಗಿರುವ ಈ ಅಧ್ಯಯನಕ್ಕೆ ಒದಗಿ ಬರುವ ಕೆಲವು ಪ್ರಾತಿನಿಧಿಕ ಚಿಂತನೆಗಳನ್ನು ಈ ಕೆಳಗಿನಂತೆ ಸಂಗ್ರಹಿಸಬಹುದಾಗಿದೆ.

ಅವುಗಳಲ್ಲಿ ಕೆಲವು ಪ್ರಮುಖ ಹೇಳಿಕೆಗಳನ್ನು ಕ್ರೋಢೀಕರಿಸುವ ಮೂಲಕ ದಾಖಲಿಸುವ ಕಾರ್ಯ ಈ ಅಧ್ಯಯನದಲ್ಲಿ ಮಾಡಲಾಗಿದೆ.

ಕನ್ನಡದಲ್ಲಿನ ಕೆಲವು ಭಾಷಾಂತರ ಕುರಿತು ಹೇಳಿಕೆಗಳು / ವ್ಯಾಖ್ಯಾನಗಳು

೧. "ಒಂದು ಮನೆತನದ ಹೆಣ್ಣನ್ನು ಇನ್ನೊಂದು ಮನೆತನಕ್ಕೆ ಮದುವೆ ಮಾಡಿ ಕೊಡುವುದು, ಆಸ್ತಿಯ ಕ್ರಯ ವಿಕ್ರಯ, ಮತಾಂತರ ಹೊಂದುವುದು, ದೇಶಾಂತರದಲ್ಲಿ ಹೋಗಿ ನೆಲೆಸುವುದು ಮೊದಲಾದ ಸಂಗತಿಗಳೆಲ್ಲ ಭಾಷಾಂತರ ಕ್ರಿಯೆಗಳೇ ಆಗಿವೆ."- ಕುರ್ತಕೋಟಿ (ಕುರ್ತಕೋಟಿ, ೧೯೯೨, ಪು.೩೨)

೨. "ಭಾಷಾಂತರವೆಂದರೆ ಎರಡು ಭಾಷೆಗಳ ನಡುವೆ ನಡೆಯುವ ವ್ಯವಹಾರ."- ಕುರ್ತಕೋಟಿ (ಕುರ್ತಕೋಟಿ, ೧೯೯೨, ಪು.೩೨)

೩. "ಅವಳ ತೊಡುಗೆ ಇವಳಿಗಿಟ್ಟು ನೋಡಬಯಸಿದೆ."- ಬಿ.ಎಂ.ಶ್ರೀ (ಬಿ.ಎಂ.ಶ್ರೀ, ೧೯೯೦, ಪು.೩)

೪. "ಅನುವಾದ ಸ್ತ್ರೀ ಇದ್ದಂತೆ; ನಿಷ್ಠಳಿದ್ದರೆ ಸುಂದರಳಿರುವುದಿಲ್ಲ, ಸುಂದರಳಿದ್ದರೆ ನಿಷ್ಠಳಿರುವುದಿಲ್ಲ ಎಂಬ ವಿನೋದೋಕ್ತಿಯಿದೆ. ಭಾಷಾಂತರವೂ ಹಾಗೆಯೇ ಎರಡನ್ನೂ ಸರಿದೂಗಿಸುವುದು ತಂತಿಯ ಮೇಲೆ ನಡೆದಂತೆ."- ಸದಾನಂದ ಕನವಳ್ಳಿ (ನಾವಡ ಎ.ವಿ., ೨೦೦೩, ಪು.೧೦೦)

೫. "ಪ್ರತಿಭೆ, ಕೌಶಲ್ಯವಿಲ್ಲದವರ ಕೈಯಲ್ಲಿ ಭಾಷಾಂತರವಿರಲಿ ಸ್ವತಂತ್ರ ಕೃತಿಯೂ ಕೊಲೆಯೇ ಆಗಬಹುದು. ದಕ್ಷ ಭಾಷಾಂತರಕಾರ ಮೂಲದ ಕೊಲೆ ಮಾಡುವುದಿಲ್ಲ, ಪುನರುತ್ಥಾನಗೊಳಿಸುತ್ತಾನೆ. ಪುನರ್ಜನ್ಮ ನೀಡುತ್ತಾನೆ." - ಸಿ.ಪಿ.ಕೆ. (ಪ್ರಧಾನ್ ಗುರುದತ್ತ, ೧೯೭೯, ಪು.೧೧೩)

೬. "ಭಾಷಾಂತರ ಸೋಮಾರಿಗಳ ಕೆಲಸವಲ್ಲ ಅದು ಪ್ರತಿಭಾವಂತರು ಕೈಗೊಳ್ಳಬೇಕಾದ ಕಾರ್ಯ." - ದೇ.ಜ.ಗೌ (ಪ್ರಧಾನ್ ಗುರುದತ್ತ, ೧೯೮೯, ಪು.೩೮)

೭. "ಸ್ವಾತಂತ್ರ್ಯ ಕಾವ್ಯದ ಪೈರು ಹುಟ್ಟುವುದಕ್ಕೆ ಮೊದಲು ನಡೆದಿರಬೇಕಾದ ಉಳುಮೆಯ ಕೆಲಸವೇ ತರ್ಜುಮೆ." - ಡಿ.ವಿ.ಜಿ (ಪ್ರಧಾನ್ ಗುರುದತ್ತ, ೧೯೮೯, ಪು.೨೪)

೮. "ಭಾಷಾಂತರ ನವ ಮೇಘರೂಪತಾಳುವ ಬಗೆ." - ಬೇಂದ್ರೆ (ಕರೀಗೌಡ ಬೀಚನಹಳ್ಳಿ, ೧೯೯೯, ಪು.೪೩)

೯. "ನಮಗೆ ಅಪರಿಚಿತವಾದುದು ಯಾವುದೋ ಒಂದು ಇರುತ್ತದೆ. ಆ ಕೊರತೆ ನಮ್ಮ ಸಾಹಿತ್ಯ ಸಂಸ್ಕೃತಿಯ ಕೊರತೆಯಾಗಿರುತ್ತದೆ. ಈ ಕೊರತೆಯನ್ನು ತುಂಬಿಕೊಳ್ಳಲು ನಾವು ಅನ್ಯ ಸಾಹಿತ್ಯ ಸಂಸ್ಕೃತಿಗಳಿಂದ ಪಡೆದುಕೊಳ್ಳುತ್ತೇವೆ. ಈ ಪಡೆದುಕೊಳ್ಳುವ ಕೆಲಸವೇ ಭಾಷಾಂತರ." - ಡಾ.ರಾಮಚಂದ್ರನ್ (ಕರೀಗೌಡ ಬೀಚನಹಳ್ಳಿ, ೧೯೯೯, ಪು.೫೨)

೧೦. "ಅನುವಾದವು ಮೂಲ ಕೃತಿಗಿಂತಲೂ ಮತ್ತು ಅನುವಾದಕನು ಮೂಲ ಕರ್ತೃವಿಗಿಂತಲೂ ಕಳಪೆ ಎಂಬ ಭಾವನೆ ದೂರವಾಗಿ, ಅನುವಾದಕನು ಎರಡು ಕಾಲಾವಧಿಗಳ ನಡುವೆ ಎರಡು ಸಂಸ್ಕೃತಿಗಳ ನಡುವೆ, ಎರಡು ಹೃದಯಗಳ ನಡುವೆ ಸ್ನೇಹಪೂರ್ಣ ಸಂಪರ್ಕವನ್ನು ಕಲ್ಪಿಸುವ ಸಾಂಸ್ಕೃತಿಕ ರಾಯಭಾರಿ ಎಂಬ ಸಂಗತಿಗೆ ಮಾನ್ಯತೆ ದೊರೆಯಬೇಕು." - ಎನ್.ಪಿ.ಶಂಕರನಾರಾಯಣ ರಾವ್ (ನಾವಡ ಎ.ವಿ., ೨೦೦೩, ಪು.೬೦)

೧೧. "ಅನುವಾದ ನನ್ನ ಸೃಜನಶೀಲ ಬರವಣಿಗೆಗೆ ಪೂರಕವಾದ ಬರವಣಿಗೆ ಅಥವಾ ಸ್ವಂತ ಬರವಣಿಗೆ ಸಾಧ್ಯವಾಗದ ಖಾಲಿ ದಿನಗಳನ್ನು ತುಂಬುವ ಕೆಲಸ." - ರಾಮಚಂದ್ರದೇವ (ನಾವಡ ಎ.ವಿ., ೨೦೦೩, ಪು.೭೦)

೧೨. "ಅನುವಾದವೆಂದರೆ ಮೂಲ ಲೇಖಕ ಮತ್ತು ಅನುವಾದಕ ಭೇಟಿಯಾಗುವ ಒಂದು ಸಂಧಿಬಿಂದು." - ರಾಮಚಂದ್ರದೇವ (ನಾವಡ ಎ.ವಿ., ೨೦೦೩, ಪು.೭೨)

೧೩. "ನಮ್ಮ ಸಂಸ್ಕೃತಿಯನ್ನು ಬಹುವಚನ ಮಾಡುವುದಕ್ಕಾಗಿ ಪರಕೀಯ ಸಂಸ್ಕೃತಿಯ ಕೃತಿಗಳು ನಮ್ಮ ಭಾಷೆಯಲ್ಲಿ ಬರಬೇಕು." - ಡಿ.ವಿ.ಜಿ (ನಾವಡ ಎ.ವಿ., ೨೦೦೩, ಪು.೭೨)

೧೪. "ಸ್ವಂತ ರಚನೆ ನೈಸರ್ಗಿಕ ಹೆರಿಗೆ ಇದ್ದಂತಿದ್ದರೆ, ಅನುವಾದ ಸಿಜೇರಿಯನ್ ಇದ್ದಂತೆ" -ಡಿ.ಎಸ್.ಚೌಗಲೆ (ನಾವಡ ಎ.ವಿ., ೨೦೦೩, ಪು.೭೩)

೧೫. "ನನ್ನ ಪ್ರಕಾರ ಅನುವಾದ ಪರಕಾಯ, ಪರ ಆತ್ಮ ಪ್ರವೇಶ ಎಂಬುದೆಲ್ಲಕ್ಕಿಂತಲೂ ಇನ್ನೂ ಏನೋ ಒಂದಿದೆ? ಅದು ದಕ್ಕಿದಾಗ ಅನುವಾದ ಒಂದು ಸೃಜನಶೀಲ ಸ್ವಂತ ರಚನೆಯಂತೆ ಮೈದುಂಬಿ ನಿಲ್ಲುತ್ತದೆ. ಬಹುಶಃ ಅದು ಅನುವಾದದ ಸ್ವಂತಿಕೆ ತೋರುವ 'ಐಡೆಂಟಿಟಿ' ರೂಪದ ನಮ್ಮತನ, ನಮ್ಮದೇ ವಿಶ್ವಭಾವದ ಪ್ರತಿರೂಪ." - ಡಿ.ಎಸ್.ಚೌಗಲೆ (ನಾವಡ ಎ.ವಿ., ೨೦೦೩, ಪು.೭೩)

೧೬. "ಮೂಲಕೃತಿ ಸೃಷ್ಟಿ, ಅನುವಾದ ಪುನರ್ ಸೃಷ್ಟಿ ಅಥವಾ ಅನುಸೃಷ್ಟಿ ಎನ್ನುವುದೇ ಮೇಲು ಅದು ಉದ್ದಿಷ್ಟ ಭಾಷೆಯಲ್ಲು ಸಲ್ಲಬೇಕು ಅಂದಾಗಲೆ ಅದು ಸಾರ್ಥಕ." -ಸದಾನಂದ ಕನವಳ್ಳಿ (ನಾವಡ ಎ.ವಿ., ೨೦೦೩, ಪು.೯೮)

೧೭. "ಅನುವಾದ ಕ್ರಿಯೆ ಒಂದು ಪ್ರಯೋಗ ಮಾತ್ರವಲ್ಲ, ಅದು ಎರಡು ಭಾಷಿಕ ಸಮುದಾಯಗಳ ನಡುವೆ ಕಟ್ಟುವ ಸೇತುವೆ." -ಸಿ.ಎನ್.ರಾಮಚಂದ್ರನ್ (ನಾವಡ ಎ.ವಿ., ೨೦೦೩, ಪು.೧೦೫)

೧೮. "ಒಟ್ಟಾರೆ ಹೇಳುವುದಾದರೆ 'ನನಗೆ ನಿಷ್ಠನಾಗಿರು' ಎಂಬ ಕೃತಿಯ ಆಗ್ರಹ ಮತ್ತು 'ನಾನು ಸುಲಭವಾಗಿ ಅರ್ಥಮಾಡಿಕೊಳ್ಳುವಂತಿರಬೇಕು' ಎಂಬ ಓದುಗನ ಆಗ್ರಹ ಇವೆರಡರ ನಡುವೆ ನಾವು ಮಾಡಿಕೊಳ್ಳುವ ಬಗೆ ಬಗೆಯ ಒಪ್ಪಂದಗಳ ಹಾಗೂ ರಾಜೀಸೂತ್ರಗಳ ದಾಖಲೆಯೇ ಅನುವಾದ ಕ್ರಿಯೆ." - ಸಿ.ಎನ್.ರಾಮಚಂದ್ರನ್ (ನಾವಡ ಎ.ವಿ., ೨೦೦೩, ಪು.೧೦೬)

೧೯. "ಶಿಷ್ಟ ಅನುವಾದವು ಒಂದು ಅರ್ಥದಲ್ಲಿ ವಿಮರ್ಶಾ ನಾಟಕದ ವಿವರಣೆ ಮಾತ್ರ"-ಉಮಾಚಂದ್ರದೇವ (ನಾವಡ ಎ.ವಿ., ೨೦೦೩, ಪು.೧೦೮)

೨೦. "ಅನುವಾದವೆಂಬುದು ತಂತಿಯ ಮೇಲೆ ನಡುಗೆ, ಕತ್ತಿಯ ಮೇಲೆ ಸಾಮು, ಮೇಲಿಂದ ಭಾರ" -ಬೆಳ್ಳಿಸ್ಸುಲ್ ಸದಾನಂದ ಶಾಸ್ತ್ರಿ (ಶಿವಕವಿ ಎಸ್.ಶಿವನಗೌಡರ್, ೧೯೯೭, ಮುನ್ನುಡಿ)

೨೧. ಅನುವಾದ ಕೆಲಸ ಮೂಲ ಕೃತಿ ರಚನೆಯಷ್ಟೇ ಸೃಜನಶೀಲ ಕೆಲಸ. "ಒಳ್ಳೆಯ ಅನುವಾದಗಳು ತಮ್ಮಷ್ಟಕ್ಕೆ ಗಮನ ಸೆಳೆಯುತ್ತವೆ. ಅವು ಸ್ಪಷ್ಟವಾದ ಮತ್ತು ಉತ್ತಮ ಗಾಜಿನಂತೆ ಪಾರದರ್ಶಕವಾಗಿದ್ದು, ಮೂಲದ ಅರ್ಥವಂತಿಕೆಯನ್ನು ಕಾಪಾಡಿಕೊಂಡು ಬರುತ್ತವೆ." - ಗುರುಮೂರ್ತಿ ಪೆಂಡಕೂರು (ಪೆಂಡಕೂರು, ೨೦೦೦, ಮುನ್ನುಡಿ)

೨೨. "ಭಾಷಾಂತರವೆಂದರೆ ವಿದ್ಯುದ್‌ದೀಪದ ಗೈರು ಹಾಜರಿಯಲ್ಲಿ ಕತ್ತಲೆ ಅನುಭವಿಸುವುದರ ಬದಲು ಮೇಣದಬತ್ತಿಯಾದರೂ ಲಭ್ಯವಿದೆಯೆಂದು ಸಮಾಧಾನ ಪಡುವಂತೆ" -ಕೆ.ಎಸ್.ನಿಸ್ಸಾರ್ ಅಹಮ್ಮದ್ (ನಿಸ್ಸಾರ್ ಅಹಮ್ಮದ್, ೨೦೦೩, ಮುನ್ನುಡಿ)

೨೩. "ಮೂಲ ಕೃತಿಯ ಧ್ವನಿ ಮತ್ತು ಆಕಾರ ಮತ್ತೊಂದು ಭಾಷೆಯಲ್ಲಿ ರೂಪಾಂತರಗೊಂಡಾಗ ಅದರಲ್ಲಿ ಮೂಲ ಕೃತಿಯ ಆತ್ಮ ಪ್ರತಿಬಿಂಬಿಸಿದರೆ ಮಾತ್ರ ಅನುವಾದ ಸಾರ್ಥಕವೆನಿಸುವುದು." -ಕೆ.ಎಚ್.ರಂಗನಾಥ (ಉಪಾಧ್ಯಾಯ ವಿ.ವಿ., ೧೯೭೪, ಮುನ್ನುಡಿ)

೨೪. "ಭಾಷಾಂತರವೊಂದು ಪುನರ್‌ಸೃಷ್ಟಿಕಾರ್ಯ ನಿಜ; ಆದರೆ ಅದು ಸ್ಫೂರ್ತಿಯ ಸೆಲೆಯೊಡೆದಾಗ ಲೀಲಾಜಾಲವಾಗಿ ಹೊನಲಿಡುವ ಪ್ರತಿಭಾ ಧಾರೆಯಲ್ಲ. ಮೂಲ ಕೃತಿಕಾರ ಮತ್ತು ಭಾಷಾಂತರಕಾರರು ಪರಸ್ಪರ ಹೃದಯ ಸಂವಾದ ಹಾಗೂ ಬೌದ್ಧಿಕ ಸಂಘರ್ಷಗಳಿಂದ ಹೊರಹೊಮ್ಮುವ ಮಿಂಚಿನಲೆಗಳು. ಅದೊಂದು ನವೀನ ಸೃಷ್ಟಿ." - ದೇ.ಜೆ.ಗೌ (ದೇ.ಜೆ.ಗೌ, ೧೯೮೮, ಮುನ್ನುಡಿ)

೨೫. "ಒಂದು ಸಂಸ್ಕೃತಿಯ ಸಾಹಿತ್ಯ ಇನ್ನೊಂದು ಸಂಸ್ಕೃತಿಯಲ್ಲಿ ಮೊದಲು ಪ್ರವೇಶಿಸುವುದೇ ಭಾಷಾಂತರದ ಮೂಲಕ. ಆಮೇಲೆ ಅದು ಭಾವಾಂತರ, ಸ್ವತಂತ್ರ್ಯ ಸಾಹಿತ್ಯಗಳಿಗೆ ದಾರಿ ಮಾಡಿಕೊಡುತ್ತದೆ." -ಎಂ.ಎಂ.ಕಲಬುರ್ಗಿ (ವೆಂಕಟೇಶ ತಿರಿಕೋ ಕುಲಕರ್ಣಿ, ೧೯೯೯, ೧೯)

೨೬. "ಭಾಷಾಂತರ ಕ್ರಿಯೆಯು ಭಿನ್ನತೆಗಳನ್ನು ಗುರುತಿಸುತ್ತಾ ಸಾಂಸ್ಕೃತಿಕ ಚಹರೆಗಳನ್ನು ಪುನಃ ಶೋಧಿಸುವುದೇ ಆಗಿದೆ. ಭಾಷಾಂತರವು ಸಾಂಸ್ಕೃತಿಕ ವಿವರಣೆಯ ಗಡಿಗಳನ್ನು ಪುನಃ ಕಟ್ಟುತ್ತದೆ. ಸಂಬಂಧಗಳ ನಿಯಮಗಳನ್ನು ಬದಲಿಸುತ್ತದೆ." - ವೀಣಾಶಾಂತೇಶ್ವರ್ (ವೀಣಾಶಾಂತೇಶ್ವರ್, ೨೦೦೧, ಮುನ್ನುಡಿ)

೨೭. "ಅನುವಾದ ಮಾಡುವವನು ಅನುವಾದದ ಭಾಷೆಗೆ ಸಹಜವಾಗಿರುವ ಧ್ವನಿಯ ಮಟ್ಟವನ್ನು ಗಮನದಲ್ಲಿಟ್ಟುಕೊಳ್ಳುವುದು ಅಗತ್ಯವಾಗುತ್ತದೆ. ಧುತ್ತನೆ ಏರಿ ಅಥವಾ ಇಳಿದು ಗೊಂದಲವೆಬ್ಬಿಸುವ

ನಮ್ಮ ದೇಶದ ವೋಲ್ಟೇಜನ್ನು ಸಮಸ್ಥಿತಿಗೆ ತರುವ ಒಂದು ಸ್ಟಬಿಲೈಸರಿನ ಕೆಲಸವನ್ನು ಅನುವಾದ ಮಾಡುವವನು ಮಾಡಬೇಕು. ಕನ್ನಡದಿಂದ ಇಂಗ್ಲಿಷ್‌ಗೆ ಹೋಗುವಾಗ ಮೂಲದ ಕೆಂಪು ನೀಲಿ ಹಸಿರುಗಳಿಗೆ ಒಂದಿಷ್ಟು ತಿಳಿ ಬೆರಸಿ ಇಂಗ್ಲಿಷನಿಂದ ಕನ್ನಡಕ್ಕೆ ಬರುವಾಗ ಮೂಲದ ಪ್ಯಾಸ್ಟಲ್ ಬಣ್ಣಗಳಿಗೆ ಬದಲು ಒಂದಿಷ್ಟು ಗಟ್ಟಿ ಬಣ್ಣ ಕಲಸಬೇಕು. ಸ್ಟಬಿಲೈಸರಿನ ಕೆಲಸ ಮಾಡದ ಅನುವಾದ ಸೋಲುವುದು ಈ ಕಾರಣಕ್ಕೆ ಅನ್ನುವುದೇ ನನ್ನ ವಾದ.'' -ಡಾ.ರಾಮಚಂದ್ರಶರ್ಮ ಬಿ.ಸಿ. (ರಾಮಚಂದ್ರಶರ್ಮ ಬಿ.ಸಿ., ೨೦೦೦, ಪು. xxvii)

೨೮. ''ಪರಂಪರೆಯ ಸಿದ್ಧವಾದ ಬಂಧದೊಳಕ್ಕೆ ಪದಗಳನ್ನು ಹೊಯ್ಯುವುದು ಎಂದೂ ಕವನವಾಗಲಾರದು. ಮೂಲದ ಧಾಟಿಯನ್ನು ಹಿಡಿಯುವುದೇ ಅನುವಾದದ ಮೂಲೋದ್ದೇಶವಾಗಿರಬೇಕು. ಅದಕ್ಕೆ ಸಹಾಯಕವಾಗುವುದೆಲ್ಲವೂ ಅನುವಾದಕ್ಕೆ ಹೊರಟವನ ಸಲಕರಣೆ. ಬಂಧವನ್ನು ಉಳಿಸಿಕೊಳ್ಳುವ ವ್ರತ ತೊಟ್ಟವನ ಅನುವಾದ ವಿಧ್ಯುಕ್ತ ಕರ್ಮಗಳಿಗಷ್ಟೆ ಗಮನಕೊಡುವ ಪೂಜಾರಿಯ ಕೆಲಸ. ಅದರಿಂದ ಪುಣ್ಯವೂ ಇಲ್ಲ, ಪುರುಷಾರ್ಥವೂ ಇಲ್ಲ. ಅನುವಾದದಲ್ಲಿ ಪ್ರಾಣಸಂಚಾರವಿರಬೇಕು. ಜೀವಂತ ಕರುವಿಗೆ ಬದಲು ಒಡ್ಡಿದ ಒಣ ಹುಲ್ಲಿನ ಮಾಟ ಯಾರಿಗೂ ಬೇಡ.''- ಬಿ.ಸಿ.ರಾಮಚಂದ್ರಶರ್ಮ (ರಾಮಚಂದ್ರಶರ್ಮ ಬಿ.ಸಿ., ೨೦೦೦, ಪು.xxix)

೨೯. ''ಭಾಷಾಂತರ ಪ್ರಜ್ಞಾಪೂರ್ವಕ ಕಲೆ'' -ಸಿ.ಪಿ.ಕೃಷ್ಣಕುಮಾರ್ (ಪ್ರಧಾನ್ ಗುರುದತ್ತ, ೧೯೮೯, ಪು.೧೧)

೩೦. ''ಭಾಷೆಗೆ ಭಾಷಾಂತರ ಹೊಸ ಸಾಣೆಯನ್ನು ಕೊಡುತ್ತದೆ. ಹೊಳಪನ್ನು ಹರಿತವನ್ನು ಉಂಟು ಮಾಡುತ್ತದೆ. ಒಟ್ಟಿನಲ್ಲಿ ಭಾಷೆಗೆ ಸಂಜೀವನಕಲ್ಪವನ್ನು ಉಂಟುಮಾಡುತ್ತದೆ.'' - ಪ್ರಧಾನ ಗುರುದತ್ತ (ಪ್ರಧಾನ ಗುರುದತ್ತ, ೧೯೮೯, ಪು.೨೭)

ಈ ಮೇಲಿನ ಪ್ರಮುಖ ವ್ಯಾಖ್ಯಾನಗಳನ್ನು ಗಮನಿಸಿದರೆ, ಕನ್ನಡ ಭಾಷಾಂತರಕಾರರು, ಭಾಷಾಂತರ ಅಧ್ಯಯನಕಾರರು, ಆಸಕ್ತ ಓದುಗರು ಹಾಗೂ ವಿದ್ವಾಂಸರು ತಮ್ಮ ಭಾಷಾಂತರ ಕೃತಿಗಳ ಬಗ್ಗೆ ಸಾಂದರ್ಭಿಕವಾಗಿ ಹೇಳಿದ ಮಾತುಗಳು ಭಾಷಾಂತರವನ್ನು ಕುರಿತು ಸಮಗ್ರ ಚಿಂತನೆಯ ಪರಿಣಾಮವಾಗಿ ಮೂಡಿಬಂದವುಗಳಲ್ಲ. ಅವು ಆಯಾ ಕೃತಿಗಳ ಸಂದರ್ಭ ವಸ್ತು, ವಿಷಯಗಳಿಗೆ ಸಂಬಂಧಿಸಿದಂತೆ ರೂಪುಗೊಂಡವುಗಳು. ಇಷ್ಟಾಗಿಯೂ ಈ ಚಿಂತನೆಗಳನ್ನು ಆಯಾ ಕೃತಿಗಳ ಸಂದರ್ಭದಿಂದ ಬೇರೆಯಾಗಿ ನೋಡಿದರೂ, ಇವುಗಳು ಭಾಷಾಂತರ ಚಿಂತನೆಯ ಭಾಗವಾಗಿ ಹೊಸ ನೆಲೆಯಲ್ಲಿ ಯೋಚಿಸಲು ದಾರಿ ಮಾಡಿ ಕೊಡಬಲ್ಲವು. ಆದುದರಿಂದ ಇಂತಹ ಚಿಂತನೆಗಳೆಲ್ಲವನ್ನು ಬಿಡಿ ಬಿಡಿಯಾಗಿ ನೋಡದೆ ಇಲ್ಲಿ ಒಂದೆಡೆ ಕ್ರೋಢೀಕರಿಸಲಾಗಿದೆ.

ಈ ವ್ಯಾಖ್ಯಾನಗಳನ್ನು ಗಮನಿಸಿದಾಗ ಇವುಗಳನ್ನು ಸ್ಥೂಲವಾಗಿ ಈ ಕೆಳಕಂಡಂತೆ ಕ್ರೋಢೀಕರಿಸಿ ವರ್ಗೀಕರಿಸಬಹುದಾಗಿದೆ. ಈ ವರ್ಗೀಕರಣವು ಭಾಷಾಂತರ ಸಂದರ್ಭದಲ್ಲಿನ ಕೆಲವು ಮುಖ್ಯ ವಿಷಯಗಳನ್ನು

ಕೈಗೆತ್ತಿಕೊಂಡು ಅವುಗಳ ಬಗ್ಗೆ ತಮ್ಮ ಅಭಿಪ್ರಾಯವನ್ನು ದಾಖಲಿಸುವುದಾಗಿದೆ.

೧. ಮೂಲನಿಷ್ಠತೆಯ ಪ್ರಶ್ನೆ

೨. ಉಪಯುಕ್ತತೆಯ ಪ್ರಶ್ನೆ

೩. ಸ್ಥಾನಮಾನದ ಪ್ರಶ್ನೆ

೪. ಕೊರತೆ ತುಂಬುವಿಕೆಯ ಸಲಕರಣೆಯಾಗಿ ಭಾಷಾಂತರ

೫. ಪ್ರತಿಮಾತ್ಮಕ ಹೇಳಿಕೆಗಳ ಹಿಂದಿನ ಆಶಯ

ಈ ರೀತಿಯ ವರ್ಗೀಕರಣ ಮಾಡುವುದರ ಮೂಲಕ ಭಾಷಾಂತರ ಚಿಂತನೆಗಳನ್ನು ವಿಶ್ಲೇಷಣೆಗೆ ಒಳಪಡಿಸಬಹುದಾಗಿದ್ದು, ಆ ಪ್ರಕ್ರಿಯೆ ಮುಂದಿನ ಅಧ್ಯಾಯದಲ್ಲಿ ನಡೆದಿರುವುದನ್ನು ಕಾಣಬಹುದು.

**ಅಡಿಟಿಪ್ಪಣಿಗಳು**

೧. ಕುರ್ತಕೋಟಿ ಕೀರ್ತಿನಾಥ, ೧೯೯೨ ಬಯಲು ಆಲಯ, ಪು.೩೨

೨. ಅದೇ, ಪು.೩೨

೩. ಶ್ರೀಕಂಠಯ್ಯ ಬಿ.ಎಂ.(ಅನು), ೧೯೯೦, ಇಂಗ್ಲೀಷ್ ಗೀತೆಗಳು, ಪು.೩

೪. ನಾವಡ ಎ.ವಿ.(ಸಂ), ೨೦೦೩, ಕನ್ನಡ ಅಧ್ಯಯನ (ಮಳೆ ಸಂಚಿಕೆ), ಪು.೧೦೦

೫. ಪ್ರಧಾನ ಗುರುದತ್ತ (ಸಂ), ೧೯೭೮, ನಾಗವಲ್ಲಿ, ಪು.೧೧೩

೬. ಪ್ರಧಾನ್ ಗುರುದತ್ತ, ೧೯೮೯, ಭಾಷಾಂತರ ಕಲೆ, ಪು.೩೮

೭. ಅದೇ, ಪು.೨೪

೮. ಕರೀಗೌಡ ಬೀಚನಹಳ್ಳಿ(ಸಂ), ೧೯೯೯, ಭಾಷಾಂತರದ ಸಾಂಸ್ಕೃತಿಕ ನೆಲೆಗಳು ಪು.೪೩

೯. ಅದೇ, ಪು.೫೨

೧೦. ನಾವಡ ಎ.ವಿ.(ಸಂ), ೨೦೦೩, ಕನ್ನಡ ಅಧ್ಯಯನ (ಮಳೆ ಸಂಚಿಕೆ), ಪು.೬೦

೧೧. ಅದೇ, ಪು.೭೦

೧೨. ಅದೇ, ಪು.೭೨

೧೩. ಅದೇ, ಪು.೭೨

೧೪. ಅದೇ, ಪು.೭೩

೧೫. ಅದೇ, ಪು.೭೨

೧೬. ಅದೇ, ಪು.೯೮

೧೭. ಅದೇ, ಪು.೧೦೫

೧೮. ಅದೇ, ಪು.೧೦೬

೧೯ ಅದೇ, ಪು.೧೦೮

೨೦. ಶಿವನಗೌಡರು ಎಸ್. ಶಿವಕವಿ (ಅನು), ೧೯೯೭ ನಾಡಕವಿ ವೇಮಣ್ಣ, ಪು.ಮುನ್ನುಡಿ

೨೧. ಗುರುಮೂರ್ತಿ ಪೆಂಡಕೂರು, ೨೦೦೦ ತೆಲುಗು ಕಾವ್ಯಮಾಲೆ, ಪು.ಮುನ್ನುಡಿ

೨೨. ನಿಸ್ಸಾರ್ ಅಹಮ್ಮದ್ ಕೆ.ಎಸ್.(ಅನು), ೨೦೦೩, ಪಾಬ್ಲೊ ನೆರುಡ ಬರೀ ಮರ್ಯಾದಸ್ಥರೆ, ಪು.ಅರಕೆ

೨೩. ಉಪಾಧ್ಯಾಯ ವಿ.ವಿ.(ಅನು), ೧೯೭೫, ಕುರೂಪಿ ಗುಮಸ್ತ ಮತ್ತು ಇತರ ಕಥೆಗಳು, ಪು.ಮುನ್ನುಡಿ

೨೪. ದೇ.ಜ.ಗೌ.(ಅನು), ೧೯೮೮, ಲಿಯೋಟಾಲ್ ಸ್ಟಾಯ್ ಅವರ ಯುದ್ಧ ಮತ್ತು ಶಾಂತಿ, ತೃತೀಯ ಸಂಪುಟ, ಪು.ಮುನ್ನುಡಿ

೨೫. ವೆಂಕಟೇಶ ತಿರುಕೊ ಕುಲಕರ್ಣಿ(ಸಂ), ೧೯೯೯. ಗಳಗನಾಥರ ಕಾದಂಬರಿ ಸಂಪುಟ-೨, ಪು.ಗನ

೨೬. ವೀಣಾಶಾಂತೇಶ್ವರ(ಅನು), ೨೦೦೧ ಯಕೃತ್ತು, ಪು.ಮುನ್ನುಡಿ

೨೭. ರಾಮಚಂದ್ರ ಶರ್ಮ ಬಿ.ಸಿ.(ಅನು), ೨೦೦೦, ಈ ಶತಮಾನದ ನೂರು ಇಂಗ್ಲೀಷ್ ಕವನಗಳು, ಪು.xxviii

೨೮. ಅದೇ, ಪು.xxix

೨೯. ಪ್ರಧಾನ ಗುರುದತ್ತ, ೧೯೮೯, ಪೂರ್ವೋಕ್ತ, ಪು.೧೧

೩೦. ಅದೇ, ಪು.೨೭

೪

# ಚಿಂತನೆಗಳ ವಿಶ್ಲೇಷಣೆ

ಕನ್ನಡ ಸಾಹಿತ್ಯದಲ್ಲಿ ಈಗಾಗಲೇ ಭಾಷಾಂತರ ಒಂದು ಪ್ರತ್ಯೇಕ ಅಧ್ಯಯನ ಕ್ಷೇತ್ರವಾಗಿಯೇ ಬೆಳೆದಿದೆ. ಕನ್ನಡದಲ್ಲಿ ಅನ್ಯಭಾಷೆಯಿಂದ ಬಹುಸಂಖ್ಯಾತ ಕೃತಿಗಳು ಭಾಷಾಂತರಗೊಂಡಿದ್ದು, ಹಲವಾರು ಭಾಷಾಂತರಕಾರರು ಭಾಷಾಂತರ ಕಾರ್ಯದಲ್ಲಿ ತೊಡಗಿಕೊಂಡಿರುವುದನ್ನು ಕಾಣಬಹುದಾಗಿದೆ. ಅದರಲ್ಲಿ ಅನೇಕರು ವೃತ್ತಿನಿರತ ಭಾಷಾಂತರಕಾರರಾಗಿದ್ದು, ಕೆಲವರು ಹವ್ಯಾಸಿ ಭಾಷಾಂತರಕಾರರು ಸೃಜನಶೀಲ ಭಾಷಾಂತರಕಾರರು ಭಾಷಾಂತರದಲ್ಲಿ ತೊಡಗಿಕೊಂಡಿರುವುದನ್ನು ಕಾಣಬಹುದು. ಹಾಗೆ ಪ್ರಾದೇಶಿಕ, ರಾಷ್ಟ್ರೀಯ, ಅಂತರಾಷ್ಟ್ರೀಯ ಭಾಷೆಗಳಿಂದ, ಅನುವಾದ, ಅನುಸೃಷ್ಟಿ ಕನ್ನಡೀಕರಣ, ಲೀಲೆ, ಭಾವಗ್ರಹಣ, ಸ್ಥಳೀಕರಣ, ಕಥಾಂತರ, ರೂಪಾಂತರ, ವೇಷಾಂತರ, ಅಳವಡಿಕೆ, ತರ್ಜುಮೆ, ಪುನರ್‌ಲೇಖ, ಪುನರ್ ಸೃಷ್ಟಿ, ಅನುರೂಪ, ಮರುರೂಪ, ಭಾಷಾಂತರ, ಮೊದಲಾದ ಪರಿಭಾಷೆಗಳಲ್ಲಿ ವಿಸ್ತೃತ ವ್ಯಾಪ್ತಿಯಲ್ಲಿ ಭಾಷಾಂತರ ಬೆಳೆಯುತ್ತಿದೆ.

"ಕನ್ನಡತಿಯುಡಿಗೆಯೊಳು, ಸಿರಿ ತುಳಸಿ ನುಡಿಬಂದು
ನಿನ್ನ ಮುಂದಾಡಿಹಳು ನಲಿದುಲಿದು ಮೆರೆದಿಹಳು
ನಿನ್ನ ಮನರಂಜನೆಗೆ ಭಿನ್ನಗಳ ಪರಿಹರಿಸೆ
ನಿನ್ನಾತ್ಮದೇಳಿಗೆಗೆ ನೀನವಳ ಬರಮಾಡು
ಕನ್ನಡಿಗ ನೀ ಪಾಡು ಕನ್ನಡಿಯೊಲಿಹ ನುಡಿಯ"[೧]

ಹೀಗೆ ಬೆಳೆಯುತ್ತಿರುವ ಭಾಷಾಂತರ ಕನ್ನಡ ಉಡುಗೆಯನ್ನು ತೊಟ್ಟು ಕನ್ನಡಿಗರ ಮುಂದೆ ಹಾಡಿ, ಕುಣಿದು, ಬೆಳೆಯುತ್ತಿದೆ. ಕನ್ನಡಿಗರನ್ನು ಮನೋರಂಜನೆಗೊಳಿಸುತ್ತ, ಅವರ ಆಸೆಗಳನ್ನು ಈಡೇರಿಸುತ್ತ, ಸಮಸ್ಯೆಗಳನ್ನು ಪರಿಹರಿಸುತ್ತ, ಕೊರತೆಗಳನ್ನು ತುಂಬಿಕೊಡುತ್ತ, ಕನ್ನಡ ಸಾಹಿತ್ಯದ ಏಳಿಗೆಗೆ ಬರುತ್ತಿರುವ ಈ ಭಾಷಾಂತರವನ್ನು ಬರಮಾಡಿಕೊ, ಕನ್ನಡಿಗ ನೀ ಹಾಡು, ಓದು, ಕಲಿ ಕನ್ನಡಕ್ಕೆ ಒಲಿದು ಬಂದಂತ ಈ ನುಡಿಗಳನ್ನು ನುಡಿ ಎಂದು ಶಂಭುರವರು ಹಿಂದಿಯ ತುಲಸಿದಾಸರ ಶ್ರೀರಾಮ ಚರಿತ ಮಾನಸವನ್ನು ಕನ್ನಡಕ್ಕೆ ಸ್ವಾಗತಿಸುವುದರ ಮೂಲಕ ಭಾಷಾಂತರವನ್ನೆ ಕನ್ನಡಕ್ಕೆ ಸ್ವಾಗತಿಸುತ್ತಿದ್ದಾರೆ.

ಈ ತೆರನಾಗಿ ಪ್ರಪಂಚದ ಮೂಲೆ ಮೂಲೆಗಳಿಂದ ಹರಿದು ಬರುತ್ತಿರುವ ಸಾಹಿತ್ಯ ಕೃತಿಗಳನ್ನು

ಮತ್ತು ಸಾಹಿತ್ಯೇತರ ಕೃತಿಗಳನ್ನು ಸ್ವಾಗತಿಸುವ ಮೂಲಕ, ಅಲ್ಲಿನ ಸಂಸ್ಕೃತಿಗಳನ್ನು ಸ್ವಾಗತಿಸಿದೆವು. ಹಾಗೆ ಅಲ್ಲಿನ ಚಿಂತನೆಗಳನ್ನು ಸ್ವಾಗತಿಸಿದೆವು. ಆ ಮೂಲಕ ಕನ್ನಡ ಭಾಷಾಂತರಕಾರರು ತಮ್ಮದೇ ಆದ ಚಿಂತನ ಕ್ರಮವನ್ನು ಬೆಳೆಸಿಕೊಂಡು ತಮ್ಮ ಭಾಷಾಂತರ ಕೃತಿಗಳ ಸಂದರ್ಭದಲ್ಲಿ ವ್ಯಕ್ತಪಡಿಸಿದ್ದಾರೆ. ಅವುಗಳಲ್ಲಿ ಕೆಲವು ಪ್ರಮುಖ ಚಿಂತನೆಗಳನ್ನು ಅಧ್ಯಾಯ ಮೂರರಲ್ಲಿ ಕ್ರೋಢೀಕರಿಸಲಾಗಿದ್ದು, ಇಲ್ಲಿನ ಚಿಂತನೆಗಳ ಹಿನ್ನೆಲೆಯಲ್ಲಿ ನೋಡಿದಾಗ ೫ ರೀತಿಯಾಗಿ ಚಿಂತನೆಗಳನ್ನು ವಿಶ್ಲೇಷಣೆಗೆ ಒಳಪಡಿಸಬಹುದು ಎಂಬುದಾಗಿ ತಿಳಿದುಬರುತ್ತದೆ. ಅವುಗಳೆಂದರೆ

೪.೧. ಮೂಲನಿಷ್ಠತೆಯ ಪ್ರಶ್ನೆ

೪.೨. ಉಪಯುಕ್ತತೆಯ ಪ್ರಶ್ನೆ

೪.೩. ಸ್ಥಾನಮಾನದ ಪ್ರಶ್ನೆ

೪.೪. ಕೊರತೆ ತುಂಬುವಿಕೆಯ ಸಲಕರಣೆಯಾಗಿ ಭಾಷಾಂತರ

೪.೫. ಪ್ರತಿಮಾತ್ಮಕ ಹೇಳಿಕೆಗಳ ಹಿಂದಿನ ಆಶಯ

## ೪.೧. ಮೂಲನಿಷ್ಠೆಯ ಪ್ರಶ್ನೆ

ಭಾಷಾಂತರದ ಬಗ್ಗೆ ಚರ್ಚಿಸುವಾಗಲೆಲ್ಲ ಮೂಲ ಮತ್ತು ನಿಷ್ಠೆಯ ಪ್ರಶ್ನೆಗಳು ಎದುರಾಗುತ್ತವೆ. ಈ ಮೂಲನಿಷ್ಠತೆ ಎಂಬ ಪ್ರಶ್ನೆ ಉದ್ಭವವಾದದ್ದೆ ಪಾಶ್ಚಾತ್ಯರಲ್ಲಿ, ಅದು ಬೈಬಲ್‌ನ ಭಾಷಾಂತರ ಸಂದರ್ಭದಲ್ಲಿ. ಬೈಬಲ್ ಧಾರ್ಮಿಕ ಗ್ರಂಥವಾದ್ದರಿಂದ ಅದು ದೇವರವಾಣಿ, ದೇವರು ಹೇಳಿದ ಮಾತು ಅದನ್ನು ಬದಲಿಸಬಾರದು, ಅದನ್ನು ಮೂಲದ ಹಾಗೆಯೇ ಪದಶಃ ಭಾಷಾಂತರ ಮಾಡಬೇಕು. ಮೂಲಕ್ಕೆ ಸಂಪೂರ್ಣವಾಗಿ ನಿಷ್ಠನಾಗಿರಬೇಕು. ಮೂಲದಿಂದ ಒಂದು ಪದ, ವಾಕ್ಯವನ್ನು ಬದಲಿಸಿದರೂ ಅದು ಮಹಾಪರಾಧ ಎಂಬ ಕಲ್ಪನೆ ಇತ್ತು. ಆದುದರಿಂದಲೇ ಪಾಶ್ಚಾತ್ಯರು ಭಾಷಾಂತರಕಾರರನ್ನು ಕೊಲೆಗಾರರು, ಹಂತಕರು, ದ್ರೋಹಿಗಳು ಎಂದು ಕರೆದಿದ್ದಾರೆ. ಈ ಹೇಳಿಕೆಗಳೇ ಮುಂದೆ ಕಾಲ ಬದಲಾದಂತೆ ಸಡಿಲವಾಗುತ್ತ ಭಾಷಾಂತರ ಮೂಲಕ್ಕೆ ನಿಷ್ಠವಾಗಿರಬೇಕು. ಜೊತೆಗೆ ಸ್ವತಂತ್ರ್ಯವಹಿಸಬೇಕು ಎಂಬ ಧೋರಣೆ ಮೂಡಿಬಂತು. ಮೂಲಕ್ಕೆ ನಿಷ್ಠವಾಗಿದ್ದು ಸ್ವತಂತ್ರವಹಿಸಬೇಕೆಂದರೆ ಯಾವ ಹಂತದಲ್ಲಿ ಮೂಲಕ್ಕೆ ನಿಷ್ಠವಾಗಿರಬೇಕು? ಮೂಲ ವಸ್ತುವಿಗೆ ನಿಷ್ಠವಾಗಿರಬೇಕೆ? ಮೂಲದ ಶೈಲಿಗೆ ನಿಷ್ಠವಾಗಿರಬೇಕೆ? ಮುಂತಾದ ಪ್ರಶ್ನೆಗಳು ಕಾಡತೊಡಗಿದವು.

ಈ ಪ್ರಶ್ನೆಗಳು ಹೆಚ್ಚಾಗಿ ಕಾಡುವುದು ಸಾಹಿತ್ಯ ಕೃತಿಗಳ ಭಾಷಾಂತರದಲ್ಲಿಯೇ ಹೊರತು ಸಾಹಿತ್ಯೇತರ ಕೃತಿಗಳ ಭಾಷಾಂತರದಲ್ಲಲ್ಲ ಸಾಹಿತ್ಯೇತರ ಕೃತಿಗಳು ಹೆಚ್ಚಾಗಿ ಪದಶಃ ಭಾಷಾಂತರಗೊಳ್ಳುತ್ತಿದ್ದು, ಅವು ಸಹಜವಾಗಿಯೇ ಮೂಲಕ್ಕೆ ನಿಷ್ಠವಾಗಿಯೇ ಇರುತ್ತವೆ. ಇವು ಶೈಲಿಯ ಸಮಸ್ಯೆಯಿಂದ ಬಹುಮಟ್ಟಿಗೆ ಮುಕ್ತವಾಗಿಯೇ ಇರುತ್ತವೆ. ಅಲ್ಲದೆ ಇಲ್ಲಿನ ಬರಹ ಸ್ಪಷ್ಟವೂ, ಖಚಿತವೂ, ನೇರವೂ ಆಗಿರುವುದರಿಂದ ಭಾಷಾಂತರವೂ ಅಷ್ಟೇ ಸ್ಪಷ್ಟವೂ, ಖಚಿತವೂ, ನೇರವೂ ಆಗಿರುವುದು ಸಾಧ್ಯ.

ಪರ್ಯಾಯಗಳ ಗೊಂದಲ ಇಲ್ಲಿ ಅಷ್ಟಾಗಿ ಬಾಧಿಸುವುದಿಲ್ಲ. ಸಾಹಿತ್ಯೇತರ ಕೃತಿಗಳಲ್ಲಿ ಮುಖ್ಯವಾಗಿರುವುದು ವಿಷಯ ಸ್ಪಷ್ಟತೆಯೇ ಹೊರತು ಶೈಲಿಯಲ್ಲ, ಅಲಂಕಾರವಲ್ಲ, ಆದುದರಿಂದ ಇವು ಹೆಚ್ಚು ಮೂಲಕ್ಕೆ ನಿಷ್ಠವಾಗಿರುವುದಾಗಿ ತಿಳಿದುಬರುತ್ತದೆ.

ಇದೇ ಮಾದರಿಯಲ್ಲಿ ಕನ್ನಡದಲ್ಲಿಯೂ ಭಾಷಾಂತರವು ಮೂಲಕ್ಕೆ ಅತ್ಯಂತ ಅಥವಾ ಸಾಧ್ಯವಾದಷ್ಟು, ನಿಷ್ಠವಾಗಿರಬೇಕೆಂಬ ಕಲ್ಪನೆ ನಮ್ಮಲ್ಲಿಂದು ಬಲವಾಗಿ ಬೆಳೆದಿದೆ. ಮೂಲವು ಶ್ರೇಷ್ಠವಾದದ್ದು, ಪವಿತ್ರವಾದದ್ದು ಅನುವಾದ ಅದಕ್ಕೆ ನಿಷ್ಠೆಯಿಂದ ಇರಬೇಕು ಎಂಬ ಕಲ್ಪನೆಗಳು ನಮ್ಮಲ್ಲಿ ಬೆಳೆದದ್ದು ಈ ಶತಮಾನದಲ್ಲಿಯೇ, ನನ್ನ ಈ ಪ್ರಬಂಧದಲ್ಲಿ 'ಮೂಲ' ಮತ್ತು 'ಅನುವಾದ'ಗಳ ಸಂಬಂಧದ ಬಗ್ಗೆ ಹೇಳುತ್ತ ಆಧುನಿಕ ಭಾಷಾಂತರಕಾರರು ಮೂಲನಿಷ್ಠತೆಯ ಬಗ್ಗೆ ತಳೆದಿರುವ ಧೋರಣೆಗಳನ್ನು ತಿಳಿಯಬಯಸುತ್ತೇನೆ.

### ಅಧ್ಯಯನಕಾರರ ನಿಲುವುಗಳು

ಮೊದಲಿಗೆ ನಾವು ಗಮನಿಸಬೇಕಾದ ಮಾತೆಂದರೆ ನಾವು ಯಾವುದನ್ನು 'ಅನುವಾದ'ವೆಂದು ಕರೆಯುತ್ತೇವೋ ಅದು ಅನುವಾದಕನಿಗೆ ಮಾತ್ರ ಅನುವಾದವಾಗಿರುತ್ತದೆ. ಕೇವಲ ಅದೊಂದೇ ಭಾಷೆಯನ್ನು ಬಲ್ಲವರಿಗೆ ಅದೇ 'ಮೂಲ'ವಾಗಿರುತ್ತದೆ. ತೀರ ಸ್ಪಷ್ಟವಾದ ಒಂದು ಉದಾಹರಣೆ ಬೇಕೆಂದರೆ ನಾವು ಯುರೋಪಿನ ಸಾಹಿತ್ಯ ಕೃತಿಗಳನ್ನು ಇಂಗ್ಲೀಷ್ ಭಾಷಾಂತರದಲ್ಲಿ ಓದಿದರೂ ನಮ್ಮ ಚರ್ಚೆಗಳಲ್ಲಿ ಅವೇ 'ಮೂಲ'ವೆಂಬಂತೆ ಪ್ರಸ್ತಾಪಗೊಳ್ಳುವುದಿಲ್ಲವೇ? ಮೂಲ ಯಾವುದೆಂದು ಪತ್ತೆ ಹಚ್ಚುತ್ತಾ ಎಲ್ಲಿಯವರೆಗೆ ಹಿಂದುಹಿಂದಕ್ಕೆ ಹೋಗಬಹುದು. ನಾವು ಯಾವುದೇ ಕೃತಿಗೆ ಮೂಲವೊಂದಿದೆ. ಅದರ ಲೇಖಕ ಮಾತ್ರ ಅದರ ಅರ್ಥದ ಮಾಲೀಕ ಎಂಬ ಕಲ್ಪನೆ ನಮ್ಮಲ್ಲಿ ಮೂಡತೊಡಗಿದ್ದು, ಬಹುಶಃ ಇಂಗ್ಲಿಷ್ ವಿದ್ಯಾಭ್ಯಾಸದಿಂದ. ಇಂಗ್ಲಿಷ್ ಭಾಷೆಯ ಆಥರ್ ಮತ್ತು ಅಥಾರಿಟಿ ಎಂಬ ಎರಡೂ ಪದಗಳ ವ್ಯುತ್ಪತ್ತಿ ಒಂದೇ, ಆಥರ್ ಎಂಬುದರೊಡನೆ ಕೃತಿಯ ಅರ್ಥದ ಮಾಲೀಕತ್ವದ, ಕೃತಿಯ ಮೇಲಿನ ಅವನ ಅಧಿಕಾರದ ಕಲ್ಪನೆಯೂ ಬೆರೆತಿದೆ. ಈ ಕಲ್ಪನೆ ಎಷ್ಟು ಗಾಢವಾಗಿದೆಯೆಂದರೆ ಕೃತಿಯೊಂದನ್ನು ಪರಿಶೀಲಿಸುವಾಗ ಲೇಖಕರ ಉದ್ದೇಶಕ್ಕೆ, ಉದ್ದೇಶಿತ ಅರ್ಥಕ್ಕೆ, ಚ್ಯುತಿ ಬಾರದಂತೆ ವ್ಯಾಖ್ಯಾನಿಸಬೇಕು ಎಂಬ ಒಂದು ವಿಮರ್ಶ ತತ್ವವೂ ಹುಟ್ಟಿಕೊಂಡಿತು. ಇಂಗ್ಲಿಷ್ ಭಾಷಾಂತರ ಆಧುನಿಕ ಶಿಕ್ಷಣಕ್ಕೆ ತೆರೆದುಕೊಂಡ ಭಾರತದಂಥ ದೇಶಗಳಲ್ಲಿ ಭಾಷಾಂತರವನ್ನು ಒಂದೆಡೆಯಲ್ಲಿ ತೀರ ಅನುಮಾನದಿಂದ ನೋಡುವ ಪರಿಪಾಠ ಬೆಳೆದಿದೆ. ಅನುವಾದವನ್ನು ದ್ವಿತೀಯ ದರ್ಜೆಯ ಸೃಜನಶೀಲತೆ ಎಂದು ಕೆಲವರು ಕರೆಯುವುದೂ ಉಂಟು. ಇಂಗ್ಲಿಷ್ ದಾನಿ ಭಾಷೆಯಾಗಿ, ಯಜಮಾನ ಭಾಷೆಯಾಗಿ, ಎಲ್ಲ ಅರ್ಥಗಳ ಮಾಲೀಕ ಭಾಷೆಯಾಗಿ ಕಂಡು ಅನುವಾದಗಳನ್ನು ಮಾಡಿಕೊಳ್ಳುವ ಕನ್ನಡದಂಥ ಭಾಷೆಗಳು ದೀನ ಭಾಷೆಗಳಾಗಿ, ಅರ್ಥ ಪ್ರಯೋಗಕ್ಕೆ 'ಗುರಿ'ಯಾದ ಭಾಷೆಗಳಾಗಿ ಕಾಣತೊಡಗಿದವು. ಭಾಷಾಂತರವೆಂದರೆ

ಕಲ್ಪಿತ ಮೂಲ ಅರ್ಥಕ್ಕೆ ಚ್ಯುತಿಬಾರದಂತೆ ಮೂಲದ ಅರ್ಥ ಗೌರವಕ್ಕೆ ಧಕ್ಕೆ ಬಾರದಂತೆ ಯಾವ ಸ್ವಾತಂತ್ರ್ಯವನ್ನು ವಹಿಸದೆ ಅತೀವ ನಿಷ್ಠೆಯಿಂದ ನಿರ್ವಹಿಸಬೇಕಾದ್ದು ಎಂಬ ತಿಳುವಳಿಕೆ ಇದೆ.[೨]

ನಿಜ ಭಾಷಾಂತರ ಮೂಲ ಕೃತಿಗೆ ನಿಷ್ಠೆಯಾಗಿದ್ದಷ್ಟು ಒಳ್ಳೆಯದು, ಸತ್ಯ ಇರುವುದು ಮೂಲ ಕೃತಿಯಲ್ಲಿ. ಮೂಲ ಕೃತಿಗೆ ಏನೋ ಮಹತ್ವವಾದ ವಿಚಾರವನ್ನು ಹೇಳುವುದಿರುತ್ತದೆ. ಅದನ್ನು ಕಂಡುಕೊಂಡು ಇನ್ನೊಂದು ಭಾಷೆಯಲ್ಲಿ ಸರಿಯಾಗಿ ವ್ಯಕ್ತಪಡಿಸಿದರೆ ಅದು ಯಶಸ್ವಿಯಾದ ಭಾಷಾಂತರವಾಗುತ್ತದೆ. ಈ ಕಾರ್ಯದಲ್ಲಿ ಅದು ಎಷ್ಟು ಯಶಸ್ವಿಯಾದರೂ ಅದಕ್ಕೆ ಮೂಲ ಕೃತಿಯ ಪ್ರಾಥಮಿಕ ಗೌರವ ದೊರೆಯಲಾರದು. ಮೂಲಕೃತಿ ಬಿಂಬವಾದರೆ ಭಾಷಾಂತರ ಅದರ ಪ್ರತಿಬಿಂಬ. ಒಂದು ಧ್ವನಿಯಾದರೆ ಇನ್ನೊಂದು ಪ್ರತಿಧ್ವನಿ.[೩]

ಆದರೆ ನಮ್ಮ ಪ್ರಾಚೀನ ಕವಿಗಳು ಯಾರೂ ರಾಮಾಯಣ ಮತ್ತು ಮಹಾಭಾರತಗಳನ್ನು ಮೂಲವೆಂದೂ, ತಮ್ಮ ಕೃತಿಗಳನ್ನು 'ಅನುವಾದ'ವೆಂದೂ ಕರೆದುಕೊಂಡಿಲ್ಲ. ಆದರೆ ತಮ್ಮನ್ನು ಅಭಿನವ ಪಂಪನೆಂದೂ, ಕುಮಾರವ್ಯಾಸನೆಂದೂ ಕರೆದುಕೊಳ್ಳುತ್ತಿದ್ದರು. ಇದರಿಂದ ಅವರು ಒಂದು ಮೂಲಕೃತಿಯನ್ನು ಇಟ್ಟುಕೊಂಡು ಅನುವಾದ ಮಾಡಿದ್ದಾರೆ ಎಂದು ತಿಳಿದು ಬರುತ್ತದೆ. ರಾಮಾಯಣ ಮಹಾಭಾರತಗಳನ್ನು ಬಿಟ್ಟರೆ ಪೂರ್ವಪುರಾಣ, ದುರ್ಗಸಿಂಹನ ಪಂಚತಂತ್ರದ ಒಂದು ಆವೃತ್ತಿ. ಬಾಣಭಟ್ಟನ ಕಾದಂಬರಿ ಇವು ಸಂಸ್ಕೃತ ಭಾಷೆಯಿಂದ ಹಳಗನ್ನಡಕ್ಕೆ ನೇರವಾಗಿ ಬಂದ ಕೃತಿಗಳು, ಇವುಗಳನ್ನು ಗಮನಿಸಿದಾಗ ತಿಳಿದುಬರುವ ಅಂಶವೆಂದರೆ, "ನಾನು ಒಂದು ಸಂಗತಿಯನ್ನು ಹೇಳಬೇಕಾಗಿದೆ ಅದಕ್ಕೆ ಇಂಥ ಕಥೆ ಸೂಕ್ತ. ಈ ಕಥೆಯನ್ನು ಇನ್ನಾವುದೋ ಭಾಷೆಯಲ್ಲಿ ಇನ್ನಾರೋ ಆಗಲೇ ಹೇಳಿದ್ದಾರೆ. ಅವರಿಗೆ ಕೊಡಬೇಕಾದ ಗೌರವವನ್ನು ಮೊದಲು ಕೊಟ್ಟು ಬಿಡೋಣ ಆಮೇಲೆ ನನಗೆ ಬೇಕಾದಂತೆ ಆ ಕಥೆಯನ್ನು ಹೇಳಿಕೊಳ್ಳುತ್ತೇನೆ ಎಂಬ ಧೋರಣೆ ಹಳಗನ್ನಡ ಕವಿಗಳಲ್ಲಿ ಕಾಣುತ್ತದೆ. ಹೀಗೆ ಕಥೆಯನ್ನು ಪುನರುಕ್ತಿಗೊಳಿಸುವುದು, ಅನುವಾದಿಸುವುದು ಕಡಿಮೆ ದರ್ಜೆಯ ಕೆಲಸವೆಂದೇನೂ ಅವರು ಭಾವಿಸಿರಲಿಲ್ಲ. ಆದುದರಿಂದಲೇ ಅವರ ಕೃತಿಗಳು ಕನ್ನಡದ ಸೋಪಜ್ಞ ರಚನೆಗಳಾಗಿ ಹೋದವು. ಇವರು ಬಳಸಿಕೊಂಡ ಕ್ರಮವಿದೆಯಲ್ಲ ಅದು ನಮ್ಮ ಇಂದಿನ ಅನುವಾದಗಳಿಗೆ ಒಂದು ಮಾದರಿಯಾಗಬಹುದೆಂದು ತೋರುತ್ತದೆ. ನಾವು ಇಂದು ಮೂಲವೆಂದು ಭಾವಿಸುವ ಆಕರಗಳಿಂದ ನೇರವಾಗಿ ಎತ್ತಿಕೊಂಡ ಭಾಗಗಳು, ಪದ್ಯಗಳು, ವಾಕ್ಯಖಂಡಗಳು ಹಳಗನ್ನಡದ ಕೃತಿಗಳಲ್ಲಿ ಕಾಣಬಹುದು. ಹಾಗಾಗೆ ಇವುಗಳನ್ನು ಭಾಷಾಂತರ ಕೃತಿಗಳು ಎಂದು ಕರೆಯಬಹುದು.

ಪ್ರಾಚೀನ ಭಾಷಾಂತರ ಕೃತಿಗಳೆಂದು ಕರೆಯಲಾಗುವ ಎಲ್ಲಾ ಕೃತಿಗಳೂ ಮೂಲಕ್ಕೆ ನಿಷ್ಠವಾಗಿದ್ದರೂ, ಅವರು ಉಪಹಿಸಿಕೊಂಡಿರುವ ಸ್ವಾತಂತ್ರ್ಯ ಇಂದಿನ ಅನುವಾದಕರ ಕಲ್ಪನೆಗೂ ಮೀರಿದ್ದು. ಇಂದಿನ ಭಾಷಾಂತರಕಾರರು ಹೆಚ್ಚು ಪಾಶ್ಚಾತ್ಯ ಭಾಷಾಂತರ ಸಿದ್ಧಾಂತಗಳಿಂದ ಪ್ರಭಾವಿತರಾಗಿ ಮೂಲಕ್ಕೆ ಅತೀ ನಿಷ್ಠವಾಗಿರಬೇಕು. ಮೂಲದಲ್ಲಿ ಇದ್ದ ಪ್ರತಿಯೊಂದು ಪಠ್ಯ ಮತ್ತು ಪಠ್ಯೇತರ ಬರಹವನ್ನು

ಅನುವಾದದಲ್ಲಿ ಉಳಿಸಿಕೊಳ್ಳಬೇಕು ಎಂಬ ಧೋರಣೆ ತೋರಿದ್ದಾರೆ. ಉದಾ : ಬಿ.ಎಂ.ಶ್ರೀಯವರು ತಮ್ಮ 'ಇಂಗ್ಲಿಷ್ ಗೀತೆಗಳು' ಕೃತಿಯ ಮುನ್ನುಡಿಯಲ್ಲಿ ಮೂಲನಿಷ್ಠತೆ ಕುರಿತು ಈ ರೀತಿ ಹೇಳಿದ್ದಾರೆ. "ಭಾಷಾಂತರಕಾರರು ಕೊಲೆಗಾರರು ಎಂದು ಪಾಶ್ಚಾತ್ಯರಲ್ಲಿ ಒಂದು ಗಾದೆಯುಂಟು. ಆ ಅಪವಾದವನ್ನು ತಪ್ಪಿಸಿಕೊಂಡಿರುವೆನೆಂದು ನಾನು ತಿಳಿದುಕೊಂಡಿಲ್ಲ. ಆದರೆ ನನ್ನ ಬುದ್ಧಿ ಬಲವಿರುವ ಮಟ್ಟಿಗೂ ಮೂಲವನ್ನು ಪ್ರತಿಬಿಂಬಿಸುವ ಕರ್ತವ್ಯವನ್ನೆ ಮುಂದಿಟ್ಟುಕೊಂಡು ಕೆಲಸ ಮಾಡಿದ್ದೇನೆ. ಕೆಲವು ಕಡೆ ಹೆಸರು, ಭಾವ ಮುಂತಾದವು ಕನ್ನಡ ಜನಕ್ಕೆ ಹೊಂದಿಕೆಯಾಗುವಂತೆ ಮಾರ್ಪಾಡಾಗಿದ್ದರೂ, ಸಾಮಾನ್ಯವಾಗಿ ಪದ ಪ್ರಯೋಗ, ಶೈಲಿ, ಛಂದಸ್ಸು, ಭಾವ, ರಸ ಇವೆಲ್ಲವೂ ಮೂಲ ಕವಿಯ ವ್ಯಕ್ತಿತ್ವವನ್ನೆ ಅನುಸರಿಸಿವೆ."

ಈ ಮೇಲಿನ ಅಂಶ ಕಾವ್ಯ ಭಾಷಾಂತರದಲ್ಲಿ ಭಾಷಾಂತರಕಾರ ತುಂಬ ಎಚ್ಚರಿಕೆ ವಹಿಸಬೇಕು. ಮೂಲ ಕವಿಯ ಪದ ಪ್ರಯೋಗ, ಶೈಲಿ, ಛಂದಸ್ಸು, ಭಾವ, ರಸಗಳಿಗೆ ನಿಷ್ಠನಾಗಿದ್ದರೂ ಹೆಸರು ಮತ್ತು ಭಾವ ಮುಂತಾದವುಗಳನ್ನು ಕನ್ನಡ ಜನಕ್ಕೆ ಹೊಂದಿಕೆಯಾಗುವಂತೆ ಮಾರ್ಪಡಿಸಿದ್ದರಿಂದ ಇಂಗ್ಲಿಷ್ ಗೀತೆಗಳು ಆಧುನಿಕ ಕನ್ನಡ ಕಾವ್ಯಪ್ರಕಾರಕ್ಕೆ ಒಂದು ಹೊಸ ಮಾರ್ಗವನ್ನೆ ನಿರ್ಮಿಸಿತು.

ಎಲ್ಲಾ ಭಾಷಾಂತರಕಾರರೂ ಬಿ.ಎಂ.ಶ್ರೀಯ ಹಾಗೆ ಸೃಜನಶೀಲ ಭಾಷಾಂತರ ಕೈಗೊಳ್ಳುವುದು ಕಷ್ಟ. ಅದರಲ್ಲೂ ಕಾವ್ಯ ಭಾಷಾಂತರದಲ್ಲಿ ಮೂಲಕ್ಕೆ ನಿಷ್ಠವಾಗಿರುವುದು ತುಂಬ ಕಷ್ಟ. ಅಲ್ಲಿ ಭಾವ ಮುಖ್ಯವಾಗಿರುವುದರಿಂದ ಪದಶಃ ಅನುವಾದ ಮಾಡಬಾರದು. ಭಾವಾನುವಾದ ಮಾಡಬೇಕು. ಭಾವಾನುವಾದದಲ್ಲಿ ಮೂಲಕ್ಕೆ ಪೂರ್ಣನಿಷ್ಠವಾಗಿರಲು ಸಾಧ್ಯವಿಲ್ಲ ಅಲ್ಲಿ ಸ್ವಾತಂತ್ರ್ಯ ವಹಿಸಬೇಕಾಗುತ್ತದೆ. ಇದನ್ನೇ ಮಾರ್ಕಂಡಪುರಂ ಶ್ರೀನಿವಾಸರು ತಮ್ಮ 'ಮಹಾಪ್ರಸ್ಥಾನ'ದ ಅನುವಾದಕರ ಮಾತಿನಲ್ಲಿ "ಮಹಾಪ್ರಸ್ಥಾನ ಕೃತಿಯಲ್ಲಿನ ಕೆಲವು ಕವಿತೆಗಳು ಮುಕ್ತ ಛಂದಸ್ಸಿನಲ್ಲಿಯೂ ಮತ್ತೆ ಕೆಲವು ಮಾತ್ರ ಛಂದಸ್ಸಿನಲ್ಲಿಯೂ ಇದ್ದು ಅವುಗಳನ್ನು ನಾನು ಕನ್ನಡಕ್ಕೆ ಅನುವಾದಿಸುವಾಗ ತೆಲುಗು ಮೂಲದ ಭಾವ, ಲಯ, ಹಾಗೂ ಭಾಷಾ ಚೌಕಟ್ಟುಗಳನ್ನು ಸಾಧ್ಯವಾದಷ್ಟು ಯಥಾವತ್ತಾಗಿ ತರುವ ಪ್ರಯತ್ನ ಮಾಡಿದ್ದೇನೆ. ಅಲ್ಲದೆ ಮೂಲದ ಭಾವ ಮತ್ತು ಲಯಗಳಿಗೆ ಧಕ್ಕೆ ಬಾರದ ಕೆಲವು ಕವಿತೆಗಳಲ್ಲಿ ತೆಲುಗು ಮೂಲದ ಛಂದಸ್ಸನ್ನು ಯಥಾವತ್ತಾಗಿ ತರುವ ಪ್ರಯತ್ನ ಮಾಡಿದ್ದೇನೆ. ಅನುವಾದದಲ್ಲಿ ಮೂಲ ಛಂದಸ್ಸಿಗೆ ಒತ್ತುಕೊಟ್ಟರೆ ಕೆಲವೆಡೆ ಭಾವ, ಲಯ, ಪ್ರಾಸಗಳಿಗೆ ಧಕ್ಕೆ ಬರುತ್ತದೆ ಎಂಬುದನ್ನು ನಾನು ಮರೆತಿಲ್ಲ ಎಂದು ಹೇಳುತ್ತಾರೆ. ಅಂದರೆ ಕಾವ್ಯ ಅನುವಾದದಲ್ಲಿ ಒಂದಕ್ಕೆ, ಒತ್ತುಕೊಟ್ಟರೆ ಇನ್ನೊಂದಕ್ಕೆ ಧಕ್ಕೆ ಬರುತ್ತದೆ ಎಂದು ತಿಳದುಬರುತ್ತದೆ.

ಹಾಗೆ ರಂ.ರಾ. ಕುಲಕರ್ಣಿಯವರು 'ಬಾಳಲರಿಯಸು ಬೀರುವು' ಎಂಬ ಕವನ ಸಂಕಲನದಲ್ಲಿ "ಒಂದು ಭಾಷೆಯ ಶಬ್ದಗಳಿಗೆ ಪ್ರತಿಯಾಗಿ ಬೇರೆ ಭಾಷೆಯ ಶಬ್ದಗಳನ್ನಿಟ್ಟರೆ ಅದು ಅನುವಾದವೆನಿಸು ವುದಿಲ್ಲ. ಅದರಿಂದ ಅನೇಕ ವೇಳೆ ಮೂಲ ಭಾವಕ್ಕೆ ಕುಂದು ಬರುವುದು ಉಂಟು. ಆದುದರಿಂದ ಶಬ್ದಶಃ

ಅನುವಾದ ಮಾಡುವುದು ಅಷ್ಟು ಸಮರ್ಪಕವಾಗಲಾರದೆಂದೂ ಭಾವಾನುವಾದವೇ ಉತ್ತಮವೆಂದೂ ಕೆಲವರು ಅಭಿಪ್ರಾಯ ಪಡುತ್ತಾರೆ. ಅದೇನೆ ಇರಲಿ ಭಾವ ಮೈಗೆಡಬಾರದೆಂಬ ಮಾತನ್ನಂತೂ ಎಲ್ಲರೂ ಒಪ್ಪುತ್ತಾರೆ''[೬] ಎಂದು ಹೇಳಿರುವುದನ್ನು ನೋಡಿದರೆ ಭಾಷಾಂತರದಲ್ಲಿ ಮೂಲ ಕೃತಿಯ ಶಬ್ದ, ಪದ, ವಾಕ್ಯಕ್ಕಿಂತ ಅದರ ಭಾವಕ್ಕೆ ನಿಷ್ಠವಾಗಿರಬೇಕು ಎಂದು ತಿಳಿದುಬರುತ್ತದೆ.

ಪ್ರೊ.ಬಿ.ಎಂ.ನಿರಂಜನ ಮೂರ್ತಿಯವರು ಜಿ.ಎಂ.ಮಲ್ಲಿಕಾರ್ಜುನ ಸ್ವಾಮಿಯವರ ಇಂಗ್ಲೀಷ್ ಕವನಗಳು ಎನ್ನುವ ಅನುವಾದಿತ ಕವನ ಸಂಕಲನಕ್ಕೆ ಹಿನ್ನುಡಿ ಬರೆಯುತ್ತ ಅದರಲ್ಲಿ ''ಇಲ್ಲಿನ ಅನುವಾದಗಳು ಮೂಲ ಕವಿಗಳ ಭಾವ ಆಶಯಗಳಿಗೆ ಸ್ವಲ್ಪವೂ ಧಕ್ಕೆಯಾಗದಂತೆ ಮೂಡಿಬಂದಿವೆ. ಅನುವಾದ ವಸ್ತುನಿಷ್ಠವಾಗಿದ್ದು, ಮೂಲದ ಬಗೆಗಿನ ಪ್ರಾಮಾಣಿಕ ನಿಷ್ಠೆ ವ್ಯಕ್ತವಾಗಿದ್ದರು, ಪದಕ್ಕೊಂದು ಪದ, ಮಾತಿಗೊಂದು ಮಾತನ್ನು ಈಡು ಮಾಡದೇ ಮೂಲದ ಭಾವ ವಿಶೇಷವನ್ನೇ ಅನುವಾದದಲ್ಲಿ ಅಭಿವ್ಯಕ್ತಿಗೊಳಿಸುವ ಪ್ರಯತ್ನ ಎಲ್ಲಾ ಕಡೆಯೂ ಎದ್ದು ಕಾಣುತ್ತದೆ ಎಂದು ಹೇಳಿದ್ದಾರೆ.''[೭] ಹಾಗಾಗಿ ಕಾವ್ಯ ಭಾಷಾಂತರದಲ್ಲಿ ಭಾವಾನುವಾದ ಮಾಡಿರುವುದೇ ಹೆಚ್ಚಾಗಿ ಕಂಡುಬರುತ್ತದೆ.

ಇನ್ನು ಅನುಭಾವ ಸಾಹಿತ್ಯವನ್ನು ಭಾಷಾಂತರ ಮಾಡುವುದು ತುಂಬ ಕಷ್ಟ ಏಕೆಂದರೆ ಅನುಭಾವಿಗಳ ಉಕ್ತಿಯೊಳಗೆ ಅಡಗಿದ ಅಭೇದ್ಯವಾದ ಜ್ಞಾನವು ವ್ಯಾಖ್ಯಾನಕ್ಕೆ ನಿಲುಕದ ರೀತಿ ಅಡಕವಾಗಿರುತ್ತವೆ. ಬೆಡಗಿನ ರೂಪದ ಆ ನುಡಿಗಳ ನಿಜವನ್ನರಿಯುವುದು. ಅರಿತು ವಿಶ್ಲೇಷಣೆಗೆ ಒಳಪಡಿಸುವುದು ಅಷ್ಟು ಸುಲಭವಲ್ಲ. ಇವುಗಳನ್ನು ಮೂಲಕ್ಕೆ ಅತ್ಯಂತ ನಿಷ್ಠವಾಗಿರಲು ಪ್ರಯತ್ನಿಸಿದರೆ ಅನುವಾದ ತುಂಬ ಕ್ಲಿಷ್ಟವಾಗುತ್ತದೆ. ಆದ್ದರಿಂದ ಅನುಭಾವ ಸಾಹಿತ್ಯವನ್ನು ಭಾಷಾಂತರಿಸಬೇಕಾದರೆ ಭಾಷಾಂತರಕಾರ ''ಪರಕಾಯ ಪ್ರವೇಶ ಮಾಡಿ'' ಸ್ವಾತಂತ್ರ್ಯವನ್ನು ವಹಿಸಿ ಭಾಷಾಂತರ ಮಾಡಬೇಕಾಗುತ್ತದೆ.

ಕಥೆಗಳ ಭಾಷಾಂತರದ ಸಂದರ್ಭದಲ್ಲಿ ಭಾಷಾಂತರ ಒಂದು ನಿಯಮಿತ ಚೌಕಟ್ಟಿನ ಒಳಗೆ ಸಾಗಬೇಕು. ಮೂಲ ಲೇಖಕನ ಲೋಕದ ಒಳಗೆ ಸಾಗುತ್ತ ಕೊನೆಗೆ ಭಾಷಾಂತರಕಾರನೂ ಮೂಲ ಲೇಖಕನಾಗಬೇಕು ಅನ್ನುವ ಅಂಶ ಕೂಡಿಕೊಂಡರೆ ಮಾತ್ರ ಮೂಲ ಕೃತಿಗೆ ಯಾವ ಧಕ್ಕೆ ಬರುವುದಿಲ್ಲ ಎಂದು ಪ್ರೊ.ಜಿ.ಶರಣಪ್ಪ ಸ್ಪರ್ಶ(ಭಾಷಾಂತರ ಕಥೆಗಳು) ಎಂಬ ಕಥಾಸಂಕಲನದ ಲೇಖಕರ ಮಾತಿನಲ್ಲಿ ಹೇಳಿದ್ದಾರೆ.[೮]

ಸಿ.ನಾಗಣ್ಣನವರು ಅನುವಾದಿಸಿದ 'ಮನ ಮೆಚ್ಚಿದ ಕಥೆಗಳು' ಎಂಬ ಕಥಾ ಸಂಕಲನದ ಬೆನ್ನುಡಿಯಲ್ಲಿ ಡಾ.ಕೆ.ಎಸ್.ಭಗವಾನರು ''ಸಂಕಲನದ ಹೆಸರೇ ಸೂಚಿಸುವಂತೆ ಅನುವಾದಕರಿಗೆ ಮೆಚ್ಚುಗೆಯಾದ ಕಥೆಗಳು ಕನ್ನಡಕ್ಕೆ ಫೋಟೋಥರ ಇಳಿದಿವೆ. ಮೂಲದಲ್ಲಿ ಗ್ರಾಮೀಣ ಪರಿಸರದ ನಿರೂಪಣೆ ಇದ್ದರೆ ಅದನ್ನು ಅನುವಾದದಲ್ಲಿ ಹಾಗೆ ತಂದಿರುವುದನ್ನು ಕಾಣಬಹುದು.[೯] ಎಂದು ಹೇಳಿರುವುದು ನೋಡಿದರೆ ಫೋಟೋ ತೆಗೆದಾಗ ಹೊರಗಿನ ಚಿತ್ರಣ ಹೇಗಿದೆಯೋ ಹಾಗೆ ಬರುತ್ತದೆಯೋ.

ಹಾಗೆಯೇ ಭಾಷಾಂತರದಲ್ಲಿ ಮೂಲಕೃತಿ ಹೇಗಿದೆಯೋ ಹಾಗೆ ಮೂಡಿಬಂದಿದೆ. ಇದರ ಅರ್ಥ ಮೂಲಕ್ಕೆ ನಿಷ್ಠವಾಗಿರುವುದು ಎಂದಂತಾಗುತ್ತದೆ. ಇದು ಮೂಲಕ್ಕೆ ಸಂಪೂರ್ಣವಾಗಿ ನಿಷ್ಠವಾಗಿರುವುದನ್ನು ತೋರಿಸುತ್ತದೆ.

ಡಾ.ಮೋಹನ್ ಕುಂಟಾರ್ ರವರು ಮಲೆಯಾಳಂನ ಶ್ರೇಷ್ಠ ಕಥೆಗಾರ ವಾಸುದೇವನ್ ನಾಯರ್ ಕಥೆಗಳನ್ನು ಕನ್ನಡಕ್ಕೆ ಅನುವಾದ ಮಾಡುತ್ತ "ಕತೆಗಳನ್ನು ಅನುವಾದಿಸುವಾಗ ಎಂ.ಟಿ.ಯವರ ಶೈಲಿಯನ್ನು ನೇರವಾಗಿ ಅನುವಾದಿಸಿದ್ದೇನೆ. ಕನ್ನಡದ ಜಾಯಮಾನಕ್ಕೆ ಹೊಂದಿಸಲು ಹೊಸ ಸೇರ್ಪಡೆಯನ್ನೋ ಕೈ ಬಿಡುವುದನ್ನೋ ಮಾಡದೆ ವಾಕ್ಯ ವಾಕ್ಯಗಳನ್ನು ಪದಶಃ ಅನುವಾದ ಮಾಡಲು ಪ್ರಯತ್ನಿಸಿದ್ದೇನೆ. ಕನ್ನಡದ ಸಂದರ್ಭದಲ್ಲಿ ಅನುವಾದ ಕೃತಕವೆನಿಸಿದರೆ ಅದಕ್ಕೆ ಇದೂ ಒಂದು ಕಾರಣವಾಗಿರಬಹುದು. ಅನುವಾದ ಸೃಜನಶೀಲವಾಗಿ ಓದಿಸಿಕೊಳ್ಳಬೇಕು ನಿಜ. ಆದರೆ ಮೂಲ ಬರಹದಲ್ಲಿ ನಿಷ್ಠೆಯಿರಿಸಿಕೊಳ್ಳಬೇಕೆಂಬುದು ಅದಕ್ಕಿಂತ ಹೆಚ್ಚು ಮುಖ್ಯ ಎಂದು ನನಗೆ ಅನ್ನಿಸಿದೆ. ಆಗ ಮಾತ್ರ ನಮ್ಮದಲ್ಲದ ಸಂಸ್ಕೃತಿಯೊಂದನ್ನು ಅನುವಾದದ ಮೂಲಕ ಕೊಡುವುದು ಸಾಧ್ಯ ಎಂದು ಭಾವಿಸಿದ್ದೇನೆ. ಹಾಗಾಗಿ ಅನುವಾದ ಮಾಡುವಾಗ ಅನುವಾದಕನ ಭಾಷೆಗಿಂತ ಮೂಲ ಲೇಖಕರ ಶೈಲಿಯ ಪರಿಚಯ ಆಗಬೇಕಾಗಿದೆ. ಅವು ಕನ್ನಡದ ಕಥೆಗಳಾಗಿ ಅನುವಾದಗೊಳ್ಳುವುದಕ್ಕಿಂತಲೂ ಮಲಯಾಳಂ ಕತೆಗಳಾಗಿಯೇ ಕನ್ನಡದಲ್ಲಿ ಗ್ರಹಿತವಾಗಬೇಕು ಎಂಬುದು ಇಲ್ಲಿಯ ಉದ್ದೇಶ ಎಂದು ಹೇಳಿರುವುದನ್ನು ನೋಡಿದರೆ ಕಥೆಗಳ ಭಾಷಾಂತರದಲ್ಲಿ ಮೂಲನಿಷ್ಠತೆ ಎಂಬುದು ಮೂಲ ಲೇಖಕನ ಭಾಷೆಗಿಂತ ಮೂಲ ಲೇಖಕನ ಶೈಲಿಯಲ್ಲಿ, ಬರಹದಲ್ಲಿ ಇರಬೇಕು ಎಂಬುದು ತಿಳಿದುಬರುತ್ತದೆ.

ತಮಿಳಿನಿಂದ ಕನ್ನಡಕ್ಕೆ ಬಂದ ಮಹಾವೈದ್ಯನಾಥ ಅಯ್ಯರ್ ರವರ ಆತ್ಮಚರಿತ್ರೆಯನ್ನು ತಮಿಳಿನಿಂದ ಕನ್ನಡಕ್ಕೆ ಅನುವಾದಿಸಿದ ಎಸ್.ಶೇಷಾದ್ರಿಯವರು ತಮಿಳು ಮತ್ತು ಕನ್ನಡಗಳು ಸೋದರ ಭಾಷೆಗಳಾದ್ದರಿಂದ ವಾಕ್ಯ ಸರಣಿಯೂ ಒಂದನ್ನೊಂದು ಹೋಲುತ್ತದೆ. ಮೂಲದ ವಾಕ್ಯ ಸರಣಿಯನ್ನು ಸಾಧ್ಯವಾದ ಮಟ್ಟಿಗೂ ಅನುವಾದದಲ್ಲಿ ವ್ಯತ್ಯಾಸ ಮಾಡದೆ ಅದೇ ರೀತಿ ಉಳಿಸಿಕೊಂಡಿದೆ. ಮಧ್ಯ ಮಧ್ಯ ಬರುವ ತಮಿಳು ವೃತ್ತಗಳನ್ನು ಹಾಗೆಯೇ ಕೊಡಲಾಗಿದೆ. ಕಾರಣ ಕೆಲವೊಂದು ಪ್ರಸಂಗಗಳು ನಡೆದವು ಎಂದು ಹೇಳಲು ಅವು ಪುರಾವೆಗಳಾಗಿವೆ ಎಂದು ಹೇಳುತ್ತಾರೆ. ಇದು ಆತ್ಮಚರಿತ್ರೆಯಾಗಿರುವುದರಿಂದ ಇಲ್ಲಿ ಭಾಷಾಂತರಕಾರ ಸಂಪೂರ್ಣವಾಗಿ ಮೂಲನಿಷ್ಠನಾಗಿರಬೇಕು. ಇಲ್ಲಿ ಅವನಿಗೆ ಸ್ವಾತಂತ್ರ್ಯ ವಹಿಸಲು ಸಾಧ್ಯವಿಲ್ಲ. ಆದುದರಿಂದ ಮೂಲಕೃತಿ ಹೇಗಿದೆಯೋ ಹಾಗೆ ಭಾಷಾಂತರ ಕೃತಿ ಇರಬೇಕಾಗುತ್ತದೆ.

ಮಿರ್ಜಿ ಎ.ಆರ್.ರವರು ತಮ್ಮ 'ನಾರ್ಸಿಸಸ್ ಮತ್ತು ಗೋಲ್ಡಮಂಡ್' ಎಂಬ ಕೃತಿಯ ಭಾಷಾಂತರದಲ್ಲಿ "ಅನುವಾದ ಎಷ್ಟೆಂದರೂ ಅನುವಾದವೇ ಅದರಲ್ಲಿ ಮೂಲದ ಸತ್ವವನ್ನು ಪೂರ್ತಿಯಾಗಿ ಹಿಡಿದಿಡಲಾಗುವುದಿಲ್ಲ. ಅದರಲ್ಲಿಯೂ ಇದು 'ಇಂಗ್ಲಿಷ್ ಗಿಂಡಿಯಿಂದ ಬಂದ ತೀರ್ಥ' ಮೂಲ ಶ್ರೇಷ್ಠ

ಕೃತಿಯ ಸ್ಥೂಲ ಪರಿಚಯವನ್ನಾದರೂ ಮಾಡಿಕೊಡುವಲ್ಲಿ ಈ ಕೃತಿ ಯಶಸ್ವಿಯಾದರೆ ನನ್ನ ಶ್ರಮ ಸಾರ್ಥಕವೆಂದುಕೊಳ್ಳುತ್ತೇನೆ. ಒಟ್ಟಾರೆ ಮೂಲ ಕೃತಿಗೆ ಅಪಚಾರವಾಗದಿದ್ದರೆ ಸಾಕು''[೧೩] ಎಂದು ಹೇಳಿರುವುದನ್ನು ಗಮನಿಸಿದರೆ ಇಂಗ್ಲೀಷ್‌ನಿಂದ ಬಂದ ಭಾಷಾಂತರ ಕೃತಿಗಳ ಮೂಲಕ್ಕೆ ನಿಷ್ಠವಾಗಿರುವುದು ಕಷ್ಟ. ಏಕೆಂದರೆ ಇದು 'ಇಂಗ್ಲಿಷ್ ಗಿಂಡಿಯಿಂದ ಬಂದ ತೀರ್ಥ' ಎಂಬಲ್ಲಿ ಇಂಗ್ಲಿಷ್ ಹಲವಾರು ಭಾಷೆಗಳಿಂದ ಸ್ವೀಕರಿಸಿ ತನ್ನದಾಗಿಸಿಕೊಂಡಿರುವುದನ್ನು ನಾವು ಸ್ವೀಕರಿಸಿಕೊಂಡಿದ್ದೇವೆ. ನಾವು ಮೂಲ ಭಾಷೆಯಿಂದ ನೇರವಾಗಿ ಭಾಷಾಂತರಿಸದೆ, ಭಾಷಾಂತರದ ಭಾಷಾಂತರಗಳನ್ನು ಸ್ವೀಕರಿಸಿದ್ದೇವೆ. ಆದುದರಿಂದ ಅದು ಗಿಂಡಿಯೊಳಗಿಂದ ಬಂದ ತೀರ್ಥ. ಇಲ್ಲಿ ಪೂರ್ಣವಾಗಿ ಮೂಲಕ್ಕೆ ನಿಷ್ಠವಾಗಿರುವುದು ಕಷ್ಟ.

ನಾಟಕಾನುವಾದದ ಸಂದರ್ಭದಲ್ಲಿ ಕೆ.ಎಸ್.ನಿಸ್ಸಾರ್ ಅಹಮ್ಮದ್ ರವರು 'ಒಥೆಲೋ' ನಾಟಕವನ್ನು ಕನ್ನಡಕ್ಕೆ ಭಾಷಾಂತರಿಸುತ್ತ, ಇಂಗ್ಲೀಷ್‌ನಲ್ಲಿ ಒಂದು ಮಾತಿದೆ "Appreciating a translation is kissing one's beleved through aveil." ಅಂದರೆ ನಲ್ಲೆಯನ್ನು ಪರದೆಯ ಮೂಲಕ ಚುಂಬಿಸಿದಂತೆ ಎನ್ನುವ ಒಂದು ಮಾತಿದೆ. ಕಡೆಗೂ ಅನುವಾದದಲ್ಲಿ ಉಳಿದುಕೊಳ್ಳುವ ಮೂಲ ಎಷ್ಟು ಎನ್ನುವುದನ್ನು ಈ ಮಾತು ಎಚ್ಚರಿಕೆ ಕೊಡುವ ಧಾಟಿಯಲ್ಲಿ ಹೇಳುತ್ತದೆ.[೧೪]

ಪಿ.ಲಂಕೇಶ್ ರವರು ಸೊಫೋಕ್ಲಿಸ್ ಮಹಾಕವಿಯ 'ದೊರೆ ಈಡಿಪಸ್ ಮತ್ತು ಅಂತಿಗೊನೆ' ಎನ್ನುವ ನಾಟಕದ ಅನುವಾದದ ಸಂದರ್ಭದಲ್ಲಿ "ನಾಟಕ ನೋಡುವಾಗ ನಾಟಕ ಧರ್ಮ ಮುಖ್ಯವಾಗುತ್ತದೆ. ನಾಟಕದ ವಿವರಗಳು ಕೂಡ ಒಟ್ಟಾರೆಯ ಲಯಕ್ಕೆ ಹೊಂದಿಕೊಂಡು ಸಮರ್ಪಕವಾಗಿದ್ದರೆ, ಸಾಕೆನ್ನಿಸುತ್ತದೆ. ಆದರೆ ನಾಟಕ ಓದುವಾಗ ನಾವು ಮೂಲದೊಂದಿಗೆ ಹೋಲಿಸುವ ಕೆಲಸ ಆರಂಭವಾಗುತ್ತದೆ. ಹೀಗೆ ಹೋಲಿಸುವ ನನ್ನ ಓದುಗರು ಅಲ್ಲಲ್ಲಿ ತಪ್ಪು ಕಾಣಲು ಸಾಧ್ಯವಿದೆ. ಮೂಲದ ವಾಕ್ಯರಚನೆ ಹೀಗಿರಲಿಲ್ಲ. ಮೂಲದ ರೂಪಕ ಈ ಗುಣದ್ದಲ್ಲ ಎನ್ನಲು ಅವಕಾಶವಿದೆ. ಆದರೆ ಈ ಎರಡಕ್ಕಿಂತ ಮೂಲದ ಉದ್ದೇಶ ಸಂದರ್ಭ ಮತ್ತು ಲಯ ಮುಖ್ಯವೆಂದಿಟ್ಟುಕೊಂಡು ನಾನು ಕನ್ನಡಿಸಿದ್ದೇನೆ ಎಂದು ಹೇಳಿದ್ದಾರೆ.[೧೫]

ಈ ಮೇಲಿನ ಹೇಳಿಕೆಯನ್ನು ಗಮನಿಸಿದರೆ ಮೂಲನಿಷ್ಠತೆ ಎಂಬುದು ಭಾಷಾಂತರಕಾರನಿಗಿಂತ, ಓದುಗನಲ್ಲಿ ಮೂಡುತ್ತದೆ. ಓದುಗ ಭಾಷಾಂತರಕಾರ ಭಾಷಾಂತರಿಸಿದ ಕೃತಿಯಲ್ಲಿ ಮೂಲಕ್ಕೆ ಎಷ್ಟು ಬದ್ಧನಾಗಿದ್ದಾನೆ ಎಂದು ಹೋಲಿಸಲು ತೊಡಗುತ್ತಾನೆ. ಭಾಷಾಂತರ ಓದುಗನಿಗೆ ಮೂಲದ ವಾಕ್ಯರಚನೆ, ಮೂಲದ ರೂಪಕ್ಕೆ ನಿಷ್ಠವಾಗಿರುವುದು ಮುಖ್ಯವಾದರೆ ಭಾಷಾಂತರಕಾರನಿಗೆ ಮೂಲದ ಉದ್ದೇಶ, ಸಂದರ್ಭ, ಮತ್ತು ಲಯಕ್ಕೆ ನಿಷ್ಠನಾಗಿರುವುದು ಮುಖ್ಯ ಎಂದು ತಿಳಿದುಬರುತ್ತದೆ.

ಇನ್ನು ಕಾದಂಬರಿಯ ಭಾಷಾಂತರ ಸಂದರ್ಭದಲ್ಲಿ ವಿ.ಸೀತಾರಾಮಯ್ಯನವರು "ಇಲ್ಲಿನ ಭಾಷಾಂತರ ಪೂರ್ತಿ ತೃಪ್ತಿಕರವೆಂದು ನಾನು ಭಾವಿಸಿಲ್ಲ. ಆದರೆ ಮೂಲದ ಸಂಪತ್ತನ್ನು ಕಾಣಿಸಲು

ಶಕ್ತಿ ಮೀರಿ ಯತ್ನಿಸಿದ್ದೇನೆ" ಎಂದಿದ್ದಾರೆ. ಇಲ್ಲಿ ಮೂಲದ ಸಂಪತ್ತು ಎಂದರೆ ಯಾವುದು, ಭಾವಸಂಪತ್ತು, ಶಬ್ದಸಂಪತ್ತು, ಶೈಲಿ ಸಂಪತ್ತನ್ನು ಶಕ್ತಿ ಮೀರಿ ತರಲು ಯತ್ನಿಸಿದ್ದೇನೆ ಎಂದಿರುವುದನ್ನು ನೋಡಿದರೆ ಮೂಲಕ್ಕೆ ಪೂರ್ಣವಾಗಿ ನಿಷ್ಠವಾಗಲು ಸಾಧ್ಯವಾಗಿಲ್ಲ ಎಂಬುದು ಸ್ಪಷ್ಟವಾಗುತ್ತದೆ. ಕಾರಣ ಅಲ್ಲಿನ ಭಾಷೆ, ನುಡಿಗಟ್ಟು, ಕಠಿಣವಾಗಿದ್ದು, ಅಲ್ಲಿನ ಸಂಸ್ಕೃತಿ ಅಪರಿಚಿತವಾದುದ್ದು. ಆದುದರಿಂದ ಮೂಲನಿಷ್ಠತೆಯ ಜೊತೆಗೆ ಸ್ವಾತಂತ್ರ್ಯವಹಿಸಬೇಕಾಗುತ್ತದೆ. ಕೆಲವು ಬಾರಿ ಮೂಲಕ್ಕೆ ಎಷ್ಟು ಸಮೀಪವಾಗಿದ್ದೇವೆಂಬುದನ್ನು ತಿಳಿದುಕೊಳ್ಳಲು ಒಂದಿನಿಂದ ಅಲ್ಲಲ್ಲಿ ವಾಕ್ಯಮಾಲೆಗಳನ್ನು ಹೋಲಿಸಿ ನೋಡಬಹುದು.

ನಾ. ಗೀತಾಚಾರ್ಯರವರು ತಮಿಳಿನ ತಿರುಕ್ಕುರಳ್‌ನ್ನು ಕನ್ನಡಕ್ಕೆ ಭಾಷಾಂತರಿಸುವಾಗ "ಅನುವಾದಕ್ಕೆ ತಮಿಳು ಮೂಲವನ್ನೆ ನೇರವಾಗಿ ಅನುಸರಿಸಿದ್ದೂ ಯಾವುದೇ ವ್ಯಾಖ್ಯಾನಗಳ ಪ್ರಭಾವಕ್ಕೆ ಒಳಗಾಗಿಲ್ಲ" ಎಂದು ಹೇಳಿರುವರು. ಇಲ್ಲಿ ಪ್ರಾಚೀನ ಲೇಖಕರನ್ನು ಪರಿಚಯಿಸುವಾಗ ಮೂಲ ಭಾಷೆ ಮತ್ತು ವಸ್ತುವಿಗೆ ನಿಷ್ಠವಾಗಿದ್ದು, ಭಾಷಾಂತರಿಸಬೇಕಾಗುತ್ತದೆ.

ಪಾರ್ವತಿ ಜಿ.ಐತಾಳರವರು ಮಲೆಯಾಳಂನ 'ದುರ್ಬೀಜ' ಕಾದಂಬರಿಯ ಅನುವಾದದ ಸಂದರ್ಭದಲ್ಲಿ "ಎಂ.ಟಿ.ಯವರು ಕಾದಂಬರಿಯಲ್ಲಿ ಸಂಭಾಷಣೆಗಳಿಗೆ ಯಥೇಚ್ಛವಾಗಿ ಬಳಸಿರುವ ತಾಜಾ ಎನ್ನಿಸುವ ಗ್ರಾಮ್ಯ ಭಾಷೆಯಲ್ಲಿ ಅರ್ಥಮಾಡಿಕೊಂಡು ಅದಕ್ಕೆ ಸರಿಸಮಾನವೆನ್ನಿಸುವ ಕನ್ನಡ ಪದಗಳ ಬಳಕೆಯ ವಿಚಾರದಲ್ಲಿ ನಾನು ತುಂಬಾ ಕಷ್ಟಪಟ್ಟಿದ್ದೇನೆ. ಇಷ್ಟಾಗಿಯೂ ಮೂಲದ ಮೆರುಗಿನ ಮುಕ್ಕಾಲು ಭಾಗವನ್ನಾದರೂ ಉಳಿಸಿಕೊಂಡಿದ್ದೇನೆಂಬ ಧೈರ್ಯ ನನಗಿಲ್ಲ." ಎಂದು ಹೇಳಿರುವುದನ್ನು ನೋಡಿದರೆ ಮೂಲವನ್ನು ಸಂಪೂರ್ಣವಾಗಿ ಹಿಡಿದಿಡಲು ಸಾಧ್ಯವಿಲ್ಲ. ಕಾದಂಬರಿಯಂತಹ ಸಾಹಿತ್ಯ ಪ್ರಕಾರದಲ್ಲಿ ಪ್ರಾಚೀನ ಕನ್ನಡ ಕವಿಗಳು ವಹಿಸಿದಂತೆ ಸ್ವಾತಂತ್ರ್ಯವಹಿಸುವುದು ಅಗತ್ಯ ಎಂಬುದು ಸ್ಪಷ್ಟವಾಗುತ್ತದೆ.

ಇನ್ನು ಕೆಲವು ಭಾಷಾಂತರಕಾರರು ಅನುವಾದಕ್ಕೆ ಒಂದೇ ಮೂಲ ಕೃತಿಯನ್ನು ಅನುಸರಿಸದೇ ಹಲವಾರು ಆಂಗ್ಲ ಭಾಷಾಂತರಗಳನ್ನು ಇಟ್ಟುಕೊಂಡು ಭಾಷಾಂತರಿಸಿರುವುದನ್ನು ಕಾಣಬಹುದು. ಉದಾಹರಣೆಗೆ, ಎಸ್.ವಿ.ರಂಗಣ್ಣನವರು ಈಸ್ಕಿಲಸ್ ನ ತನಿ ಎರೆಯುವವರು ಎಂಬ ಕೃತಿಯಲ್ಲಿ "ಈ ಅನುವಾದಕ್ಕೆ ಹಲವಾರು ಆಂಗ್ಲ ಭಾಷಾಂತರಗಳನ್ನು ಉಪಯೋಗಿಸಿದ್ದರೂ, ಪೂರ್ಣವಾಗಿ ಒಂದೇ ಪುಸ್ತಕವನ್ನು ಅನುಸರಿಸಿಲ್ಲ. ಇದಕ್ಕೆ ಕಾರಣ ಅವುಗಳ ಅತಿ ವ್ಯಾಪಕ ಭಿನ್ನತೆ. ಅನುಮಾನ ಬಂದೆಡೆಯಲ್ಲೆಲ್ಲ ಈಸ್ಕಿಲಸ್ಸನ ಉದ್ದೇಶವನ್ನು ಗಮನದಲ್ಲಿರಿಸಿಕೊಂಡು ಅನುವಾದ ಮಾಡಲಾಗಿದೆ" ಎಂದು ಹೇಳಿದ್ದಾರೆ. ಇಂತಹ ಸಂದರ್ಭದಲ್ಲಿ ಮೂಲನಿಷ್ಠತೆ ಎಂಬುದು ಗೌಣವಾಗುತ್ತದೆ.

ಈ ಅಂಶಗಳನ್ನು ಗಮನಿಸಿದಾಗ ನಾವು ಇಂದು ಪ್ರಾದೇಶಿಕ ರಾಷ್ಟ್ರೀಯ, ಅಂತರಾಷ್ಟ್ರೀಯ ಭಾಷೆಗಳಿಂದ ಕೃತಿಗಳನ್ನು ಹೆಚ್ಚಿನ ಪ್ರಮಾಣದಲ್ಲಿ ಭಾಷಾಂತರಿಸಿಕೊಳ್ಳುತ್ತಿದ್ದರೂ. ಭಾಷಾಂತರವನ್ನು

ದ್ವಿತೀಯ ದರ್ಜೆಯ ಕಾರ್ಯವೆಂದು ನಂಬಿಕೊಂಡು ಬಿಟ್ಟಿದ್ದೇವೆ. ಇಂಗ್ಲೀಷ್ ಯಜಮಾನ ಕಲ್ಪಿಸಿಕೊಂಡಿರುವ ಅರ್ಥವನ್ನು ಕಿಂಚಿತ್ತೂ ಬದಲಾಯಿಸುವುದೂ ಅಪರಾಧವೆಂಬ ಭ್ರಮೆಯಲ್ಲಿ ಸಿಲುಕಿಕೊಂಡಿದ್ದೇವೆ. ಮೂಲನಿಷ್ಠತೆಯ ಹಠ ತೀವ್ರವಾಗಿ ಪರಭಾಷೆಯ ಕೃತಿಯನ್ನು ಆಕಾರವಾಗಿ ಸ್ವೀಕರಿಸಿ ಸ್ವಾತಂತ್ರ ಅರ್ಥಗಳನ್ನು ಹೊಮ್ಮಿಸುವ ಸಾಮರ್ಥ್ಯವನ್ನು ಕಳೆದುಕೊಳ್ಳುತ್ತಿದ್ದೇವೆ. ಭಾಷಾಂತರ ಎಂಬ ಪದವೇ ಓದುಗರಲ್ಲಿ ಒಂದು ಬಗಯೆ ಪ್ರತಿರೋಧವನ್ನು ಹುಟ್ಟಿಸುವಂತೆ ಕಾಣುತ್ತದೆ. ಇಂದು ಕನ್ನಡದಲ್ಲಿ ಇಂಗ್ಲೀಷ್ ಮೂಲದಿಂದ ಭಾಷಾಂತರಗೊಂಡ ಕೃತಿಗಳು ತಮ್ಮ ವಿದೇಶಿ ಪೌರತ್ವವನ್ನು ಉಳಿಸಿಕೊಂಡು ನಮ್ಮಲ್ಲಿ ಕೆಲಕಾಲ ಪ್ರವಾಸಕ್ಕೆ ಬಂದ ಜನರಂತೆ ಕಾಣುತ್ತವೆ ಅಷ್ಟೆ. ಸಾಹಿತ್ಯದ ಅನುವಾದದ ಬಗ್ಗೆ ಕೀಳರಿಮೆ ಮತ್ತು ಭಯ, ಆತಂಕಗಳು ಕಳೆದ ಕೆಲವು ದಶಕಗಳಿಂದ ನಮ್ಮಲ್ಲಿ ಹೆಚ್ಚಾಗಿವೆ. ಕನ್ನಡ ಸಾಹಿತ್ಯದ ಸ್ಥಿತ್ಯಂತರಕ್ಕೆ ಕಾರಣವಾದ ಕೃತಿಗಳೆಲ್ಲ, ಈ ಒಂದು ಸಾವಿರ ವರ್ಷಗಳಲ್ಲಿ ಅನುವಾದ ಪ್ರಕ್ರಿಯೆಯ ಮೂಲಕವೇ ರೂಪುಗೊಂಡವು. ನಮ್ಮ ಹಳೆಯ ಕವಿಗಳಿಗೆ ತಮಗೆ ಬೇಕಾದುದನ್ನು ಬೇಕಾದ ಆಕರಗಳಿಂದ ಪಡೆದುಕೊಂಡು ಹಾಗೆ ಪಡೆದುದನ್ನು ಬೇಕಾದ ರೀತಿಯಲ್ಲಿ ತಮ್ಮದಾಗಿಸಿಕೊಳ್ಳುವ, ಅನುವಾದಿಸಿಕೊಳ್ಳುವ ಸ್ವಾತಂತ್ರ್ಯ ಮತ್ತು ಧೈರ್ಯ ಇತ್ತಲ್ಲ ಅದು ಇಂದಿನ ಅನುವಾದಗಳಿಗೆ ಅಗತ್ಯವಾಗಿ ಬೇಕಾಗಿರುವ ಗುಣ ಎಂದೇ ನಾನು ತಿಳಿದಿದ್ದೇನೆ. ಅಂಥ ಧೈರ್ಯ ಮತ್ತು ಸ್ವಾತಂತ್ರ್ಯಗಳು ಅನುವಾದಗಳನ್ನು ಕೇವಲ ದ್ವಿತೀಯ ದರ್ಜೆಯ ಸೃಷ್ಟಿಯಾಗುವುದನ್ನು ತಪ್ಪಿಸುತ್ತವೆ.

ಈ ಮೇಲಿನ ಮೂಲನಿಷ್ಠತೆಯನ್ನು ಕುರಿತ ಚಿಂತನೆಗಳ ವಿಶ್ಲೇಷಣೆಗಳನ್ನು ಗಮನಿಸಿದಾಗ ತಿಳಿದುಬರುವ ಅಂಶಗಳೆಂದರೆ

೧. ಕಾವ್ಯ, ನಾಟಕ, ಕಥೆ, ಕಾದಂಬರಿ ಅನುಭಾವಿ ಸಾಹಿತ್ಯ ಪ್ರಕಾರಗಳಲ್ಲಿ ಮೂಲನಿಷ್ಠತೆ ಕಷ್ಟ. ಇಲ್ಲಿ ಕೇವಲ ಭಾಷೆ, ಭಾವ, ಲಯ, ಛಂದಸ್ಸು, ವಸ್ತು, ಶೈಲಿಗಳಲ್ಲಿ ಕೆಲವಕ್ಕೆ, ನಿಷ್ಠವಾಗಿದ್ದರೆ ಕೆಲವುಗಳಲ್ಲಿ ಸ್ವಾತಂತ್ರ್ಯವಹಿಸಬೇಕಾಗುತ್ತದೆ.

೨. ಆತ್ಮಚರಿತ್ರೆ, ಜೀವನ ಚರಿತ್ರೆ, ಪುರಾತನರ ಚರಿತ್ರೆಗಳಲ್ಲಿ ಮೂಲನಿಷ್ಠತೆಯನ್ನು ತೋರಬಹುದು.

೩. ಸಾಹಿತ್ಯೇತರ ಕೃತಿಗಳಲ್ಲಿ ಸಹಜವಾಗಿ ಮೂಲನಿಷ್ಠವಾಗಿರುವುದನ್ನು ಕಾಣಬಹುದು.

೪. ಪ್ರಾಚೀನ ಸಾಹಿತ್ಯದಲ್ಲಿ ಮೂಲನಿಷ್ಠತೆಗಿಂತ ಸ್ವಾತಂತ್ರ್ಯವಹಿಸಿರುವುದೆ ಹೆಚ್ಚು.

೫. ಆಧುನಿಕ ಸಾಹಿತ್ಯದಲ್ಲಿ ಪಾಶ್ಚಾತ್ಯ ಸಾಹಿತ್ಯ ಪ್ರಭಾವದಿಂದ ಅದರಲ್ಲೂ ಇಂಗ್ಲಿಷ್ ಸಾಹಿತ್ಯ ಪ್ರಭಾವದಿಂದ ಮೂಲಕೃತಿಗೆ ನಿಷ್ಠವಾಗಿರಲೇಬೇಕು ಎಂಬ ಭಾವನೆ ಭಾಷಾಂತರಕಾರರಲ್ಲಿ ಗಾಢವಾಗಿ ಬೇರೂರಿರುವುದು ಕಂಡುಬರುತ್ತದೆ.

೬. ಮೂಲನಿಷ್ಠತೆ ಎಂಬುದು ಭಾಷಾಂತರ ಕೃತಿ, ಸಂದರ್ಭ, ಮೂಲ ಲೇಖಕ, ಭಾಷಾಂತರಕಾರರು ಮತ್ತು ಭಾಷೆಯ ಮೇಲೆ ನಿರ್ಧಾರವಾಗುತ್ತದೆ.

೭. ಒಂದೇ ಮೂಲಕೃತಿಯಿದ್ದು ನೇರವಾಗಿ ಭಾಷಾಂತರಗೊಂಡ ಕೃತಿಯಲ್ಲಿ ಮೂಲನಿಷ್ಠತೆ ಬಗ್ಗೆ ಮಾತನಾಡಿರುವುದನ್ನು ಕಾಣಬಹುದು.

೮. ಹಲವು ಭಾಷಾಂತರ ಕೃತಿಗಳಿಂದ ಒಂದು ಭಾಷಾಂತರ ಕೃತಿ ರಚನೆಗೊಂಡಿದ್ದರೆ ಅಲ್ಲಿ ಮೂಲ ನಿಷ್ಠತೆ ಕಂಡುಬರುವುದಿಲ್ಲ.

೯. ಭಾಷಾಂತರ ಕೃತಿಯಲ್ಲಿ ಪೂರ್ಣಪ್ರಮಾಣದ ಮೂಲನಿಷ್ಠತೆ ಇಲ್ಲದಿದ್ದರೂ, ಕೆಲವು ಕಡೆಗಳಲ್ಲಾದರೂ ಮೂಲನಿಷ್ಠತೆ ಇರಬೇಕು.

೧೦. ಭಾಷಾಂತರ ಕೃತಿಗಳಲ್ಲಿ ಪೂರ್ಣ ಸ್ವತಂತ್ರವಹಿಸಲು ಸಾಧ್ಯವಿಲ್ಲ. ಎಂಥಾ ಸೊಪಜ್ಞಕೃತಿಯಾದರೂ ಮೂಲಕ್ಕೆ ಸ್ವಲ್ಪವಾದರೂ ನಿಷ್ಠವಾಗಿರಬೇಕು.

ಇಲ್ಲಿನ ಎಲ್ಲಾ ಅಂಶಗಳು ಯಾವ ಸಾಹಿತ್ಯ ಪ್ರಕಾರದಲ್ಲಿ ಎಷ್ಟರ ಮಟ್ಟಿಗೆ ಮೂಲಕ್ಕೆ ನಿಷ್ಠವಾಗಿರಬೇಕು ಯಾವ ಸಾಹಿತ್ಯ ಪ್ರಕಾರದಲ್ಲಿ ಸ್ವಾತಂತ್ರ್ಯವಹಿಸಬೇಕು ಎಂಬುದನ್ನು ತಕ್ಕಮಟ್ಟಿಗಾದರೂ ಮಾರ್ಗ ಸೂಚಿಯಾಗಿವೆ ಎಂಬುದನ್ನು ತಿಳಿಸುತ್ತ ಇವು ನನ್ನ ಸಂಶೋಧನೆಯಲ್ಲಿ ಮೂಲ ನಿಷ್ಠತೆಯ ಪ್ರಶ್ನೆಗೆ ಕಂಡುಕೊಂಡ ಉತ್ತರವಾಗಿದ್ದು, ಇನ್ನು ವಿಸ್ತೃತ ಅಧ್ಯಯನ ನಡೆದಂತೆ ಹೆಚ್ಚಿನ ಮಾಹಿತಿ ದೊರೆಯುವ ಸಾಧ್ಯತೆಗಳಿವೆ.

## ೪.೨. ಉಪಯುಕ್ತತೆಯ ಪ್ರಶ್ನೆ

ಇಂದು ಜಗತ್ತು ಒಂದಾಗುತ್ತಿದೆ ಮತ್ತು ಕಿರಿದಾಗುತ್ತಿದೆ. ಅನೇಕ ಭಾಷೆಗಳನ್ನಾಡುವ ಜನರು ಒಂದೆಡೆ ಕಲೆಯುವುದು ಅನಿವಾರ್ಯ. ಅಲ್ಲದೆ ನಮ್ಮ ಭಾಷೆಯಲ್ಲಿಲ್ಲದ ಜ್ಞಾನ, ಅನುಭವಗಳು ಬೇರೆ ಭಾಷೆಗಳಲ್ಲಿವೆ. ಜಗತ್ತಿನ ಆಸ್ತಿಗೆಲ್ಲ ನಾವು ಹಕ್ಕುದಾರರು ಬೇರೆ ಭಾಷೆಗಳಲ್ಲಿರುವ ನಿಧಿಗಳೂ ನಮ್ಮ ಸ್ವತ್ತಾಗಬೇಕು. ಆದರೆ ಎಲ್ಲಾ ಭಾಷೆಗಳನ್ನೂ ಎಲ್ಲರೂ ಕಲಿಯಲಾಗುವುದಿಲ್ಲ ಆದರೆ ಅವುಗಳಲ್ಲಿರುವ ಸಾರಬೇಕು ನಮಗೆ. ಅದುದರಿಂದ ನಮಗಿರುವ ಸುಲಭವಾದ ದಾರಿ ಭಾಷಾಂತರವೊಂದೆ.

ಭಾಷೆಗಳ ಇತಿಹಾಸವನ್ನು ನೋಡಿದರೆ ಭಾಷಂತರಗಳೂ ಭಾಷೆ ಸಾಹಿತ್ಯಗಳನ್ನೂ ಶ್ರೀಮಂತ ಮಾಡಲು ಸಹಾಯ ನೀಡಿವೆ ಮತ್ತು ಜ್ಞಾನವನ್ನೂ ಒದಗಿಸಿವೆ. ಕನ್ನಡ ಭಾಷೆ-ಸಾಹಿತ್ಯಗಳಿಗೆ ಸಂಸ್ಕೃತದ ಮತ್ತು ಪ್ರಾಕೃತದ ನೆರವಿಲ್ಲದಿದ್ದರೆ ವೈದಿಕ, ಬೌದ್ಧ ಮತ್ತು ಜೈನ ಗ್ರಂಥಗಳಲ್ಲಡಗಿದ್ದ ಜ್ಞಾನರಾಶಿ ಮತ್ತು ಶಬ್ದ ಸಂಪತ್ತು ನಮಗಿಲ್ಲದಾಗುತ್ತಿತ್ತು. ಅನೇಕ ಶಿವಶರಣರ ಕಥೆಗಳೆಲ್ಲ ತಮಿಳಿನಿಂದ ತೆಗೆದುಕೊಂಡದ್ದಾಗಿವೆ.

ಇಂಗ್ಲಿಷ್ ಸಾಹಿತ್ಯದ ಅತ್ಯಂತ ಶ್ರೇಷ್ಠಕವಿ ಷೇಕ್ಸಪಿಯರ್‌ನ ಕಾವ್ಯ ಸೃಷ್ಟಿಗೆ ಭಾಷಾಂತರವಾದ ಸಾಹಿತ್ಯದ ನೆರವು ಅಷ್ಟಿಷ್ಟಲ್ಲ. ಷೇಕ್ಸಪಿಯರ್‌ನಿಗೆ ಗ್ರೀಕ ಲ್ಯಾಟಿನ್ ಭಾಷೆಗಳಲ್ಲಿ ಪಾಂಡಿತ್ಯವಿರಲಿಲ್ಲವಂತೆ. ಅವನು ಬರೆದ ಗ್ರೀಸ್‌ನ ಮತ್ತು ರೋಮಿನ ಮಹಾಪುರುಷರನ್ನು ಕುರಿತ ನಾಟಕಗಳಿವೆ. ಪ್ಲೂಟಾರ್ಕ

ಎಂಬುವವನು ಬರೆದ ಮಹಾಪುರುಷರ ಜೀವನ ಚಿತ್ರಗಳನ್ನುಳ್ಳ ಗ್ರೀಕ್ ಗ್ರಂಥದ ಇಂಗ್ಲಿಷ್ ಭಾಷಾಂತರವೇ ಆಧಾರ. ಇನ್ನು ಕೆಲವು ನಾಟಕಗಳು, ಕಥೆಗಳು ಇಟಾಲಿಯನ್ ಭಾಷೆಯಲ್ಲಿ ಬರೆದಿದ್ದ ಕಾದಂಬರಿಗಳ ಕಥೆಗಳು. ಇನ್ನೊಬ್ಬ ಪ್ರಸಿದ್ಧ ಇಂಗ್ಲಿಷ್ ಕವಿ ಕೀಟ್ಸ್ ನ ಕವಿತೆಗಳಲ್ಲಿ ಗ್ರೀಕ್ ಸಂಸ್ಕೃತಿಯ ಪ್ರಭಾವವನ್ನು ಕಾಣುತ್ತೇವೆ. ಆದರೆ, ಕೀಟ್ಸ್ ಕವಿಗೆ ಗ್ರೀಕ್ ಬರುತ್ತಿರಲಿಲ್ಲ. ಅವನು ತನ್ನ ಒಂದು ಕವಿತೆಯಲ್ಲಿ ತಾನು ಚಾಪಮನ್ ಎಂಬ ಇಂಗ್ಲಿಷ್ ವಿದ್ವಾಂಸನೊಬ್ಬನು ಬರೆದ ಹೋಮರ್ ಕವಿಯ 'ಇಲಿಯಡ್ ' ಕಾವ್ಯದ ಭಾಷಾಂತರವನ್ನು, ಓದಿದಾಗ ತನಗಾದ ರೋಮಾಂಚಕಾರಿ ಅನುಭವವನ್ನು ಪರಿಣಾಮಕಾರಿಯಾಗಿ ವ್ಯಕ್ತಪಡಿಸಿದ್ದಾನೆ. ಇಂತಹ ಉದಾಹರಣೆಗಳು ಇನ್ನೆಷ್ಟೋ ಇವೆ. ಯಾವ ದೇಶದ ಭಾಷೆ ಸಾಹಿತ್ಯಗಳಾಗಲಿ ಶ್ರೀಮಂತವಾಗಿರುವುದಕ್ಕೆ ಬೇರೆ ಭಾಷೆಗಳಿಂದ ಭಾಷಾಂತರವಾದ ವಸ್ತುಗಳೂ ಸ್ವಲ್ಪ ಮಟ್ಟಿಗಾದರೂ ಕಾರಣವಾಗಿವೆ.

ಧರ್ಮ ಸಾಹಿತ್ಯಗಳು ಪ್ರಧಾನವಾಗಿದ್ದ ಹಿಂದಿನ ಯುಗದಲ್ಲಿ ಒಂದು ಕಾರಣಕ್ಕೆ ಭಾಷಾಂತರ ಬೇಕಾಗಿದ್ದರೆ, ವಿಜ್ಞಾನ ಯುಗವಾದ ಈ ಕಾಲದಲ್ಲಿ ಅದರ ಜೊತೆಗೆ ಅದಕ್ಕಿಂತಲೂ ಹೆಚ್ಚಾಗಿ ತಾಂತ್ರಿಕಜ್ಞಾನ (Technology) ಮತ್ತು ಉತ್ಪಾದನಾ ರೀತಿಗಳನ್ನು (Kno-how) ಕುರಿತ ಗ್ರಂಥಗಳ ಭಾಷಾಂತರ ಅಗತ್ಯವೆನಿಸಿದೆ. ಜಗತ್ತಿನ ನಾನಾ ದೇಶಗಳನ್ನು ವಿವರಿಸುವ ಮತ್ತು ಆ ದೇಶಗಳ ಜನರನ್ನು ಜನಜೀವನವನ್ನು ಪರಿಚಯಿಸುವ ಅವರ ಧರ್ಮ ನೀತಿ ಆಚಾರಗಳನ್ನು ತಿಳಿಸಿಕೊಡುವ, ಅವರ ವಿಜ್ಞಾನ ಸಾಹಿತ್ಯಗಳಲ್ಲಿನ ಮಹಾತ್ಸಾಧನಗಳನ್ನು ನಮಗೆ ತಂದುಕೊಡುವ ಭಾಷಾಂತರಗಳು ಜಗತ್ತಿನ ಜನರೆಲ್ಲರೂ ಶಾಂತಿ ಸೌಹಾರ್ದಗಳಿಂದ ಉತ್ತಮ ಜೀವನ ನಡೆಸಲು ಜನರ ಮನಸ್ಸನ್ನು ಸಿದ್ಧಗೊಳಿಸಲು ಬೇಕಾಗಿದೆ. ಇದು ಸಾಹಿತ್ಯಿಕ ಭಾಷಾಂತರಗಳಿಂದ ಸಾಧ್ಯ.[೨೦]



ಈ ಎಲ್ಲಾ ಅಂಶಗಳನ್ನು ಗಮನಿಸಿದಾಗ ಪ್ರಸ್ತುತ ದಿನಮಾನಗಳಲ್ಲಿ ಭಾಷಾಂತರ ಸಮಾಜದ ಎಲ್ಲಾ ಕ್ಷೇತ್ರಗಳಲ್ಲು ನಡೆಯುತ್ತಿರುವಂತಹ ಕಾರ್ಯವಾಗಿದ್ದು, ಸಾಹಿತ್ಯ ಮತ್ತು ಸಾಹಿತ್ಯೇತರ ಕ್ಷೇತ್ರಗಳಾದ, ವಿಜ್ಞಾನ, ತಂತ್ರಜ್ಞಾನ, ಸಮಾಜವಿಜ್ಞಾನ, ಶಿಕ್ಷಣ ಮುಂತಾದ ಕ್ಷೇತ್ರಗಳಲ್ಲಿ ಅಲ್ಲದೆ ಜನರ ಸಹಜ ಮಾತಿನಲ್ಲು ಭಾಷಾಂತರ ಕ್ರಿಯೆ ಸಹಜವಾಗಿ ನಡೆಯತ್ತಿರುತ್ತದೆ. ಅಲ್ಲದೆ ಅದು ಒಂದು ಕಾಲ, ದೇಶ ಮತ್ತು ಭಾಷೆಗೆ ಸೀಮಿತವಾಗಿರದೆ, ಎಲ್ಲಾ ದೇಶ ಭಾಷೆಗಳಲ್ಲೂ ನಡೆಯುವಂತಹ ಕ್ರಿಯೆಯಾಗಿದೆ. ಇಷ್ಟು ವ್ಯಾಪಕವಾಗಿ ಕಂಡುಬರುತ್ತಿರುವ ಭಾಷಾಂತರ ಪ್ರಕ್ರಿಯೆಯ ಸಾರ್ಥಕತೆಯನ್ನು ಉಪಯುಕ್ತತೆಯನ್ನು ಭಾಷಾಂತರಕಾರರು ಯಾವ ರೀತಿಯಲ್ಲಿ ಗ್ರಹಿಸಿಕೊಂಡಿದ್ದಾರೆ ಎಂಬುದನ್ನು ಕುರಿತು ಮುನ್ನುಡಿ, ಬೆನ್ನುಡಿಗಳಲ್ಲಿನ ಚಿಂತನೆಗಳನ್ನು ವಿಶ್ಲೇಷಣೆಗೆ ಒಳಪಡಿಸುವುದರ ಮೂಲಕ ತಿಳಿಯುವ ಪ್ರಯತ್ನ ಮಾಡಲಾಗಿದೆ.

ಭಾಷಾಂತರ ಉಪಯುಕ್ತತೆಯನ್ನು ಮಾರ್ಕಂಡಪುರಂ ಶ್ರೀನಿವಾಸರವರು ತಮ್ಮ ಮಹಾಪ್ರಸ್ಥಾನ ಕೃತಿಯ ಅನುವಾದಕರ ಮಾತಿನಲ್ಲಿ "ಯಾವುದೇ ಒಂದು ಭಾಷೆಯ ಒಬ್ಬ ಕವಿ ತನ್ನ ಪ್ರತಿಭೆಯಿಂದಲೋ,

ತನ್ನ ಭಾವನೆಗಳಿಂದಲೋ, ತನ್ನ ಭಾಷಾ ಶೈಲಿಯಿಂದಲೋ ವೈಶಿಷ್ಟ್ಯಪೂರ್ಣವೂ, ಪ್ರಭಾವಶಾಲಿಯೂ ಆದ ಕವಿಯಾಗಿದ್ದಲ್ಲಿ ಅಂಥ ಕವಿಯನ್ನು ಸಾಹಿತ್ಯ ದೃಷ್ಟಿಯಿಂದ ಬೇರೆ ಭಾಷೆಯವರಿಗೆ 'ಪರಿಚಯಿಸುವುದು ತುಂಬಾ ಅಗತ್ಯ. ಇದರಿಂದ ಎರಡು ಕಡೆ ಸಾಹಿತ್ಯ ಚಿಂತನಾ ದೃಷ್ಟಿಯಿಂದ ಸಾಕಷ್ಟು ಪ್ರಯೋಜನವಾಗಬಹುದು'[೨೧] ಎಂದು ಹೇಳಿರುವುದನ್ನು ಗಮನಿಸಿದರೆ ಭಾಷಾಂತರದಿಂದ ಎರಡೂ ಸಾಹಿತ್ಯದಲ್ಲಿ ಚಿಂತನೆಗಳು ವಿನಿಮಯಗೊಳ್ಳುತ್ತವೆ. ಉದಾ: ಭಾರತದ ರಾಮಾಯಣ ಮಹಾಭಾರತಗಳು ಪಾಶ್ಚಾತ್ಯರ ಚಿಂತನೆಯನ್ನು ಹೇಗೆ ಬೆಳೆಸಿವೆಯೋ ಹಾಗೆ ಸಾಕ್ರಟಿಸ್, ಪ್ಲೇಟೋ, ಅರಿಸ್ಟಾಟಲ್, ಕಾರ್ಲ್‌ಮಾರ್ಕ್ಸ್, ಲೇನಿನ್, ಷೇಕ್ಸ್‌ಪಿಯರ್, ಕೀಟ್ಸ್, ಟಾಲ್ ಸ್ಟಾಯ್, ವರ್ಡ್ಸ್ ವರ್ಥ್ ಮುಂತಾದವರ ಚಿಂತನೆಗಳು ಭಾರತೀಯರನ್ನು ಆಕರ್ಷಿಸಲು ಭಾಷಾಂತರಗಳು ಕಾರಣವಾಗಿರುವುದಾಗಿ ತಿಳಿಯಬಹುದು.

ಇನ್ನು 'ಯುದ್ಧ ಮತ್ತು ಶಾಂತಿ' ಎನ್ನುವ ಕೃತಿಯಲ್ಲಿ ದೇ.ಜ.ಗೌ.ರವರು "ಒಂದು ಭಾಷಾ ಶ್ರೀಮಂತನಿಗೆ ಹಾಗೂ ಜನಾಂಗ ಜನಾಂಗಗಳ ನಡುವಣ ಭಾವೈಕ್ಯಕ್ಕೆ ಹಾಗೂ ಸಾಂಸ್ಕೃತಿಯ ಸಂವರ್ಧನೆಗೆ ಭಾಷಾಂತರಗಳು ಅನಿವಾರ್ಯವೆಂಬುದನ್ನು ಸಮಾಜ ಅರಿಯಬೇಕು"[೨೨] ಎಂದು ಹೇಳಿದ್ದಾರೆ. ಅಂದರೆ ಯಾವುದೇ ಒಂದು ಭಾಷೆ ಸಮೃದ್ಧವಾಗಿ ಬೆಳೆಯಬೇಕು. ಹೊಸ ಹೊಸ ಒಲವುಗಳನ್ನು ಕಾಣಬೇಕೆಂದರೆ ಅದು ಭಾಷಾಂತರದಿಂದ ಸಾಧ್ಯ. ಉದಾಹರಣೆಗೆ ಕನ್ನಡ ಭಾಷೆಯು ಇಂಗ್ಲಿಷ್, ಗ್ರೀಕ್, ಲ್ಯಾಟೀನ್, ಅರಬ್ಬಿ, ಉರ್ದು, ಹಿಂದಿ, ಸಂಸ್ಕೃತ, ತಮಿಳು, ತೆಲುಗು, ಮಲೆಯಾಳಂ ಮುಂತಾದ ಭಾಷೆಗಳಿಂದ ಕೃತಿಗಳನ್ನು ಭಾಷಾಂತರ ಮಾಡಿಕೊಂಡಿರುವುದರಿಂದ ಸಮೃದ್ಧವಾಗಿ ಬೆಳೆದಿದೆ. ಹಾಗೆ ಭಾಷಾಂತರ ಮಾಡಿಕೊಳ್ಳದೆ ಮಡಿವಂತಿಕೆ ಮಾಡಿದ ಸಂಸ್ಕೃತ ಭಾಷೆ ತಟಸ್ಥವಾಗಿದೆ. ಆದುದರಿಂದ ಭಾಷಾಂತರದಿಂದ ಭಾಷೆ ಮತ್ತು ಸಾಹಿತ್ಯ ಶ್ರೀಮಂತವಾಗುತ್ತದೆ. ಅದೇ ತೆರನಾಗಿ ಜನಾಂಗ ಜನಾಂಗಗಳ ನಡುವಣ ಭಾವೈಕ್ಯತೆಯನ್ನು ಬೆಳೆಸುತ್ತದೆ. ಆರ್ಯ ದ್ರಾವಿಡರ ನಡುವೆ, ಕಪ್ಪು-ಬಿಳಿಯರ ನಡುವೆ, ಹಿಂದೂ-ಮುಸ್ಲಿಂ ನಡುವೆ ಭಾಷಾಂತರ ಭಾವೈಕ್ಯತೆಯನ್ನು ಬೆಳೆಸುತ್ತದೆ. ಹಾಗೆ ಸಂಸ್ಕೃತಿಯ ಸಂವರ್ಧನೆಗೂ ಭಾಷಾಂತರ ಉಪಯುಕ್ತವಾಗಿದೆ. ಇದನ್ನು ಅರಿತು ಸಮಾಜ ಭಾಷಾಂತರವನ್ನು ಒಂದು ಸೃಜನಶೀಲ ಸಾಹಿತ್ಯ ಎಂದು ಪರಿಗಣಿಸಿ ಉನ್ನತ ಸ್ಥಾನ ನೀಡಬೇಕು.

ಕೀರ್ತಿನಾಥ ಕುರ್ತಕೋಟಿಯವರು ಚಿನ್ನದ ಹಕ್ಕಿಯ ಮುನ್ನುಡಿಯಲ್ಲಿ "ಭಾಷೆಯ ಅಂತರವನ್ನು ಮರೆಸದ ಭಾಷಾಂತರ ವ್ಯರ್ಥ"[೨೩] ಎಂದು ಹೇಳಿದ್ದಾರೆ. ಇದರ ಅರ್ಥ ಭಾಷಾಂತರ ಭಾಷೆ ಭಾಷೆಗಳ ನಡುವಿನ ಗೋಡೆಯನ್ನು ಕಡೆದು, ಕಂದಕವನ್ನು ತುಂಬಿ ಅವುಗಳ ನಡುವಿನ ಅಂತರವನ್ನು ಹೋಗಲಾಡಿಸಿ ಸಂಬಂಧವನ್ನು ಬೆಸೆಯುವುದರ ಮೂಲಕ ನಮಗೆ ಉಪಯುಕ್ತವಾಗಿದೆ.

ಇದನ್ನೆ ಸಿ.ಎನ್.ರಾಮಚಂದ್ರನ್ ರವರು "ಅನುವಾದ ಕ್ರಿಯೆ ಒಂದು ಪ್ರಯೋಗ ಮಾತ್ರವಲ್ಲ ಅದು ಎರಡು ಭಾಷಿಕ ಸಮುದಾಯಗಳ ನಡುವೆ ಕಟ್ಟುವ ಸೇತುವೆ"[೨೪] ಎಂದು ಹೇಳಿದ್ದಾರೆ. ಅಂದರೆ

ಹೇಗೆ ಸೇತುವೆ ಎರಡು ಪ್ರದೇಶಗಳ ನಡುವಿನ ಕಂದಕವನ್ನು ತುಂಬಿ, ಅವುಗಳ ಮಧ್ಯೆ ಸಂಬಂಧವನ್ನು ಬೆಸೆಯುತ್ತದೊ ಹಾಗೆ ಭಾಷಾಂತರವು ಎರಡು ಭಾಷಿಕ ಸಮುದಾಯಗಳ ಮಧ್ಯೆ ಉದಾ : ಕನ್ನಡ-ಇಂಗ್ಲೀಷ್, ಕನ್ನಡ-ಮರಾಠಿ, ಕನ್ನಡ-ಸಂಸ್ಕೃತ, ಕನ್ನಡ-ತೆಲುಗು, ಕನ್ನಡ-ಮಲೆಯಾಳಂ ಮುಂತಾದವುಗಳ ಮಧ್ಯೆ ಸಂಬಂಧವನ್ನು ಬೆಸೆಯಲು ಉಪಯುಕ್ತವಾಗಿದೆ.

ವೀಣಾಶಾಂತೇಶ್ವರರವರು 'ಯಕೃತ್ತು' ಎನ್ನುವ ನಾಟಕದ ಅನುವಾದದ ಸಂದರ್ಭದಲ್ಲಿ ಭಾಷಾಂತರದ ಉಪಯುಕ್ತತೆಯನ್ನು ಈ ರೀತಿ ಹೇಳಿದ್ದಾರೆ. ''ಭಾಷಾಂತರ ಕ್ರಿಯೆಯು ಭಿನ್ನತೆಗಳನ್ನು ಗುರುತಿಸುತ್ತಾ ಸಾಂಸ್ಕೃತಿಕ ಚಹರೆಗಳನ್ನು ಪುನಃ ಶೋಧಿಸುವುದೇ ಆಗಿದೆ. ಭಾಷಾಂತರವು ಸಾಂಸ್ಕೃತಿಕ ವಿವರಣೆಯ ಗಡಿಗಳನ್ನು ಪುನಃ ಕಟ್ಟುತ್ತದೆ. ಸಂಬಂಧಗಳ ನಿಯಮಗಳನ್ನು ಬದಲಿಸುತ್ತದೆ.''[೨೦] ಅಂದರೆ ಭಾಷಾಂತರದಿಂದ ಅಡಕವಾಗಿರುವ ಕಣ್ಮರೆಯಲ್ಲಿರುವ ಸಂಸ್ಕೃತಿಗಳನ್ನು ಹುಡುಕಿ ಹೊರತರುವುದರೊಂದಿಗೆ ಅವುಗಳಲ್ಲಿ ಇರುವ ಭಿನ್ನತೆಗಳನ್ನು ಗುರುತಿಸುತ್ತದೆ. ಉದಾ : ಭಾಷಾಂತರವು ಭಾರತೀಯರಿಗೆ ಪಾಶ್ಚಾತ್ಯ ಸಂಸ್ಕೃತಿಯನ್ನು ಪರಿಚಯಿಸುವ ಜೊತೆಗೆ ಅಲ್ಲಿನ ಸಂಸ್ಕೃತಿ ಹೇಗೆ ಭಾರತೀಯ ಸಂಸ್ಕೃತಿಗಿಂತ ಭಿನ್ನ ಎಂಬುದನ್ನು ತೋರಿಸಿಕೊಡುತ್ತದೆ. ಇದಕ್ಕೆ ಸ್ಪಷ್ಟ ಉದಾಹರಣೆಯೆಂದರೆ 'ಮೋಬಿಡಿಕ್' ಕಾದಂಬರಿ ವಿ.ಸೀತಾರಾಮಯ್ಯನವರೆ ಹೇಳುವಂತೆ "ತಿಮಿಂಗಿಲ ಬೇಟೆ, ಸಮುದ್ರಯಾನ, ತಿಮಿಂಗಿಲಿಗರ ಬದುಕಿನ ವಸ್ತು ನಮಗೆ ತೀರ ಅಪರಿಚಿತ; ಅನುಭವಕ್ಕೆ ದೂರ, ಆದರೂ ಆ ಬಗೆಯ ಕೃತಿ ನಮ್ಮ ಸಾಹಿತ್ಯದಲ್ಲಿ ಏಕೆ ಭಾರತೀಯ ಭಾಷಾ ಸಾಹಿತ್ಯದಲ್ಲಿ ಎಲ್ಲಿಯೂ ಬಂದಿಲ್ಲವೆಂಬ ಸಂಗತಿ ಅಂಥದನ್ನು ನಮ್ಮ ಜನಕ್ಕೆ ಪರಿಚಯ ಮಾಡಿಕೊಡಬೇಕೆಂಬ ಆಕಾಂಕ್ಷೆ ನನ್ನನ್ನು ಆ ಕಾರ್ಯಕ್ಕೆ ತೊಡಗಲು ಆಗ ಉತ್ತೇಜಿಸಿದವು.''[೨೧] ಹಾಗೆ ಭಾಷಾಂತರವು ಸಾಂಸ್ಕೃತಿಕ ಗಡಿಗಳನ್ನು ತಿಳಿಸುತ್ತದೆ. ಯಾವ ಯಾವ ಪ್ರದೇಶದಲ್ಲಿ ಯಾವ ಯಾವ ಸಂಸ್ಕೃತಿಗಳು ನೆಲೆಯೂರಿವೆ ಎಂಬುದನ್ನು ತಿಳಿಸುವುದರೊಂದಿಗೆ ಸಂಬಂಧಗಳ ನಿಯಮಗಳನ್ನು ಬದಲಿಸುತ್ತದೆ.

ಈ ಭಾಷಾಂತರದಿಂದ ಭಾಷಾಂತರಕಾರನಿಗಾದ ಉಪಯೋಗವನ್ನು ಮೊಳಕಲ್ಮೂರು ಶ್ರೀನಿವಾಸಮೂರ್ತಿ ಅವರು 'ಮುರಿದ ರೆಕ್ಕೆಗಳು' ಕೃತಿಯ ಅನುವಾದದ ಸಂದರ್ಭದಲ್ಲಿ ಹೀಗೆ ಹೇಳಿದ್ದಾರೆ. ''ಅನುವಾದದಿಂದ ನನ್ನ ಭಾಷಾಜ್ಞಾನ ಇಂಪ್ರೂವ್ ಆಯಿತು. ಮತ್ತು ಅನುವಾದ ನನ್ನಂಥವರು ಮಾಡುವಂಥದ್ದಲ್ಲ ಎನ್ನುವ ಅಂಜಿಕೆ ಹೋಯಿತು. ಇಲ್ಲಿ ಇನ್ನೊಂದು ಮಾತು ನನಗೆ ಖುಷಿ ಕೊಟ್ಟ ವಿಚಾರವೆಂದರೆ ಈ ಕಾದಂಬರಿಯಲ್ಲಿ ಬರುವ ಸನ್ನಿವೇಶಗಳನ್ನು, ವೈಚಾರಿಕ ಸಂಗತಿಗಳನ್ನು ಆರಿಸಿಕೊಂಡು ಎರಡು ಮೂರು ಕವನಗಳನ್ನು ರಚಿಸಿದ್ದು, ಅವು ಧ್ವನಿ ಸುರುಳಿಯಲ್ಲಿ ಈಗಾಗಲೇ ಸುಗಮಸಂಗೀತದ ಗೀತಗಳಾಗಿ ಬಂದಿವೆ.''[೨೨]

ಅಂದರೆ ಭಾಷಾಂತರವು ಭಾಷಾಂತರಕಾರನನ್ನು ಸೃಜನಶೀಲ ಲೇಖಕನನ್ನಾಗಿಸುತ್ತದೆ ಎಂದು ತಿಳಿಯಬರುತ್ತದೆ. ಇದೇ ರೀತಿಯ ಅನುಭವ ಮತ್ತೊಬ್ಬ ಭಾಷಾಂತರಕಾರರಾದ ಬ್ಯಾಳಿ ಕೆ.ಬಿ.ಅವರಿಗೆ

ಆಗಿದೆ. ಇವರು ಕನ್ನಡಕ್ಕೆ ರೂಬಾಯಿಗಳನ್ನ ಉರ್ದುವಿನಿಂದ ಅನುವಾದ ಮಾಡುವ ಸಂದರ್ಭದಲ್ಲಿ ಹೀಗೆ ಹೇಳಿದ್ದಾರೆ. "೮೫ ರುಬಾಯಿಗಳನ್ನು ಅನುವಾದ ಮಾಡಿದಾಗ ನಾನೂ ಕನ್ನಡದಲ್ಲಿ ರುಬಾಯಿಗಳನ್ನೇಕೆ ಬರೆಯಬಾರದು, ವಿಚಾರಿಸಿ ಬರೆಯಲು ಪ್ರಾರಂಭಿಸಿದೆ ಬರೆದ ೨೫ ರುಬಾಯಿಗಳನ್ನು ಇದರಲ್ಲಿ ಜೋಡಿಸಿರುವೆ."[೨೮]

ಈ ಸಂಗತಿಗಳನ್ನು ಗಮನಿಸಿದರೆ ಭಾಷಾಂತರ ಕೃತಿಯು ಭಾಷಾಂತರಕಾರನಿಗೆ ಸ್ಫೂರ್ತಿಯ ಸೆಲೆಯಾಗಿ ಕಾವ್ಯ, ಕಥೆ, ನಾಟಕ, ರುಬಾಯಿಗಳು ಮುಂತಾದ ಸೃಜನಶೀಲ ಸಾಹಿತ್ಯ ರಚನೆಗೆ ಇಂಬು ನೀಡುವುದರೊಂದಿಗೆ ಭಾಷಾಂತರಕಾರನನ್ನು ಒಬ್ಬ ಸೃಜನಶೀಲ ಲೇಖಕನನ್ನಾಗಿ ಪರಿವರ್ತಿಸುವ ಶಕ್ತಿ ಭಾಷಾಂತರಕ್ಕಿದೆ ಎಂದು ಇದರಿಂದ ತಿಳಿದುಬರುತ್ತದೆ. ಇದೇ ಭಾಷಾಂತರಕಾರನಿಗಾಗುವ ಬಹುಮುಖ್ಯ ಉಪಯೋಗ.

"ಸ್ವತಂತ್ರ್ಯ ಕಾವ್ಯದ ಪೈರು ಹುಟ್ಟುವುದಕ್ಕೆ ಮೊದಲು ನಡೆದಿರಬೇಕಾದ ಉಳುಮೆಯ ಕೆಲಸವೆ ತರ್ಜುಮೆ"[೨೯] ಎಂದು ಡಿ.ವಿ.ಜಿ.ಯವರು ಒಂದೆಡೆ ಹೇಳಿದ್ದಾರೆ. ಅಂದರೆ ಸಮೃದ್ಧ ಸಾಹಿತ್ಯ ಬೆಳೆಯಬೇಕಾದರೆ ಭಾಷಾಂತರ ಅಗತ್ಯವಾಗುತ್ತದೆ ಎಂದಂತಾಯಿತು. ಈ ಮಾತಿಗೆ ಎರಡು ರೀತಿಯಲ್ಲಿ ಅರ್ಥ ಮಾಡಬಹುದು. ಇನ್ನೊಂದು ಸಾಹಿತ್ಯದ ವಿಶಿಷ್ಟ ಕೃತಿಗಳನ್ನು ಭಾಷಾಂತರಿಸಿಕೊಳ್ಳುವುದರ ಮೂಲಕ ತನ್ನ ಸಾಹಿತ್ಯವನ್ನು ಸಮೃದ್ಧವಾಗಿಸಿಕೊಳ್ಳಬಹುದು ಎಂಬುದು ಮೂಲ ಅರ್ಥ. ಇಂದು ಇಂಗ್ಲಿಷ್ ಸಾಹಿತ್ಯ ಅತ್ಯಂತ ಸಮೃದ್ಧವಾಗಿ ಪರಿಣಮಿಸಿರುವುದಕ್ಕೆ ಕಾರಣ ಎಲ್ಲಾ ದಿಕ್ಕುಗಳಿಂದಲೂ ಭಾಷಾಂತರದ ಪೂರ ಹರಿದು ಬಂದಿರುವುದು ಕೆಲವೊಮ್ಮೆ ಭಾಷಾಂತರಗಳು ಅಪೂರ್ವ ಕ್ರಾಂತಿಯನ್ನೆಸಗಿ ಅಗಾಧ ಸಾಹಿತ್ಯ ಸೃಷ್ಟಿಗೆ ಕಾರಣವಾಗುತ್ತವೆ ಎನ್ನುವುದರಲ್ಲಿ ಈ ಹೇಳಿಕೆಯ ಇನ್ನೊಂದು ಅರ್ಥ ಅಡಗಿದೆ.

ಓ.ಎಲ್.ನಾಗಭೂಷಣಸ್ವಾಮಿಯವರು ತಮ್ಮ 'ಭಾಷಾಂತರ' ಕೃತಿಯಲ್ಲಿ ಭಾಷಾಂತರದ ಉಪಯೋಗವನ್ನು ಕುರಿತು 'ಭಾಷಾಂತರ ಮೂಲೋದ್ದೇಶ(ಟೆಲಿಯಾಲಜಿ)ದ ಅನಿವಾರ್ಯ ಅಗತ್ಯ. ಒಂದು ರೂಪಕವನ್ನು ಬಳಸಿ ಹೇಳುವುದಾದರೆ ಬೇರೆ ಬೇರೆ ದಿಕ್ಕುಗಳಲ್ಲಿ ಹರಿಯುವ ವಾಕ್ ಪ್ರವಾಹವು ಅರ್ಥದ ಸಾಗರದಲ್ಲಿ ಐಕ್ಯ ಹೊಂದುವುದಕ್ಕೆ ಭಾಷಾಂತರವನ್ನುಳಿದು ಅನ್ಯ ಮಾರ್ಗವಿಲ್ಲ"[೩೦] ಎಂದಿದ್ದಾರೆ. ಅಂದರೆ ಹಲವು ಭಾಷೆಗಳು, ಒಂದು ಭಾಷೆಯಲ್ಲಿ ಬೆರೆತು ಸಾಗರೋಪಾದಿಯಲ್ಲಿ ಬೆಳೆಯಬೇಕಾದರೆ ಅದು ಭಾಷಾಂತರದಿಂದ ಮಾತ್ರ ಸಾಧ್ಯ. ಅನ್ಯಮಾರ್ಗ ಇಲ್ಲ ಎಂದು ಹೇಳಿದ್ದಾರೆ.

ಪ್ರಧಾನ ಗುರುದತ್ತರವರ ಪ್ರಕಾರ ಭಾಷಾಂತರದ ಉಪಯೋಗವೆಂದರೆ "ಭಾಷೆಗೆ ಭಾಷಾಂತರ ಹೊಸ ಸಾಣೆಯನ್ನು ಕೊಡುತ್ತದೆ ಹೊಳಪನ್ನು, ಹರಿತವನ್ನು ಉಂಟು ಮಾಡುತ್ತದೆ. ಒಟ್ಟಿನಲ್ಲಿ ಭಾಷೆಗೆ ಸಂಜೀವನ ಕಲ್ಪವನ್ನು ಉಂಟು ಮಾಡುತ್ತದೆ[೩೧] ಎಂದು ಹೇಳಿದ್ದಾರೆ. ಅಂದರೆ ಭಾಷಾಂತರ ಭಾಷೆಗೆ ಹೊಸ ಹೊಸ ಕೃತಿಗಳನ್ನು ಸೇರಿಸುವ ಮೂಲಕ ಸಾಣೆಯನ್ನು ಹಿಡಿದು ಭಾಷೆಗೆ ಹೊಳಪನ್ನು ನೀಡುವುದರ

ಮೂಲಕ ಭಾಷೆಗೆ ಸಂಜೀವನಕಲ್ಪವನ್ನು ನೀಡುವುದೇ ಭಾಷಾಂತರದಿಂದ ಭಾಷೆಗೆ ಆಗುವ ಉಪಯೋಗವಾಗಿದೆ.

ಈ ಮೇಲಿನ ಎಲ್ಲಾ ಅಂಶಗಳನ್ನು ಗಮನಿಸಿದಾಗ ಭಾಷಾಂತರದಿಂದ ಇಷ್ಟೆಲ್ಲ ಉಪಯೋಗವಿದೆಯೇ ಎಂದು ಆಶ್ಚರ್ಯಪಡುವಂತಾಗಿದೆ. ಭಾಷಾಂತರದಿಂದ ಸಾಹಿತ್ಯ ಕ್ಷೇತ್ರದಲ್ಲೆ ಇಷ್ಟೆಲ್ಲ ಉಪಯೋಗವಿರುವಾಗ ಸಾಹಿತ್ಯೇತರ ಕ್ಷೇತ್ರಗಳಲ್ಲಿ ಅದರ ಉಪಯೋಗ ಇನ್ನೆಷ್ಟಿರಬಹುದು. ನಮ್ಮಲ್ಲಿ ಸಾಹಿತ್ಯೇತರ ಕೃತಿಗಳು ಭಾಷಾಂತರಗೊಂಡಿರುವುದೇ ಅಲ್ಪಪ್ರಮಾಣದಲ್ಲಿ ಅದರಲ್ಲೂ ಸಾಹಿತ್ಯೇತರ ಭಾಷಾಂತರಕಾರರು ಭಾಷಾಂತರದ ಉಪಯುಕ್ತತೆಯನ್ನು ಕುರಿತು ಮಾತನಾಡಿರುವುದು ಅಷ್ಟಾಗಿ ಕಂಡುಬರುವುದಿಲ್ಲ. ಅವರು ನೇರವಾಗಿ ಭಾಷಾಂತರ ಮಾಡಿ ಬಿಟ್ಟು ಬಿಟ್ಟಿರುತ್ತಾರೆ. ಅಷ್ಟೆ ಅವರು ಭಾಷಾಂತರ ಪ್ರಕ್ರಿಯೆಯ ಬಗ್ಗೆ ಎಲ್ಲೂ ಮಾತನಾಡಲು ಹೋಗುವುದಿಲ್ಲ. ಆದರೆ ಸಾಹಿತ್ಯ ಭಾಷಾಂತರಕಾರರು ಭಾಷಾಂತರದ ಉಪಯುಕ್ತತೆಯ ಬಗ್ಗೆ ಈ ಮೇಲಿನಂತೆ ಮುನ್ನುಡಿ, ಬೆನ್ನುಡಿಗಳಲ್ಲಿ ಕೃತಿಗಳ ಸಂದರ್ಭಕ್ಕನುಗುಣವಾಗಿ, ವಸ್ತುವಿಗನುಗುಣವಾಗಿ ಭಾಷೆ, ಶೈಲಿಗನುಗುಣವಾಗಿ ತಮ್ಮ ಅಭಿಪ್ರಾಯ, ಅನಿಸಿಕೆಗಳನ್ನು ವ್ಯಕ್ತಪಡಿಸಿರುವುದನ್ನು ಕಾಣಬಹುದು.

ಈ ರೀತಿಯಾಗಿ ಭಾಷಾಂತರಕಾರರು ವ್ಯಕ್ತಪಡಿಸಿರುವ ಭಾಷಾಂತರದ ಉಪಯುಕ್ತತೆಯನ್ನು ಈ ಕೆಳಗಿನಂತೆ ಪಟ್ಟಿ ಮಾಡಬಹುದಾಗಿದೆ.

೧. ಎರಡು ಭಾಷೆಗಳು ಸಮೃದ್ಧವಾಗಿ ಬೆಳೆಯಲು ಭಾಷಾಂತರ ಉಪಯುಕ್ತವಾಗಿದೆ.

೨. ಒಂದು ಭಾಷೆಯ ಸಂಸ್ಕೃತಿ ಇನ್ನೊಂದು ಭಾಷೆಯ ಸಂಸ್ಕೃತಿಯೊಂದಿಗೆ ಬೆರೆತು ಸಾಂಸ್ಕೃತಿಕ ವಿನಿಮಯಕ್ಕೆ ಉಪಯುಕ್ತವಾಗಿದೆ.

೩. ಭಾಷಾಂತರ ಭಾಷೆ ಭಾಷೆಗಳ ನಡುವೆ ಸ್ನೇಹ, ಬಾಂಧವ್ಯ ಬೆಸೆಯುತ್ತದೆ.

೪. ಜನಾಂಗ ಜನಾಂಗಗಳ ನಡುವೆ ಭಾವೈಕ್ಯತೆ ಮತ್ತು ಸಾಂಸ್ಕೃತಿಕ ಸಂವರ್ಧನೆಗೆ ಭಾಷಾಂತರ ಉಪಯುಕ್ತವಾಗಿದೆ.

೫. ಭಾಷೆ ಭಾಷೆಗಳ ನಡುವಿನ ಅಡ್ಡಗೋಡೆಗಳನ್ನು ಒಡೆಯುವ ಸಲಕರಣೆಯಾಗಿದೆ.

೬. ಭಾಷಾಂತರ ಸಂಸ್ಕೃತಿಯನ್ನು ಪುನಃ ಶೋಧಿಸಲು ಉಪಯುಕ್ತವಾಗಿದೆ.

೭. ಭಾಷಾಂತರ ಎರಡು ಭಾಷಿಕ ಸಮುದಾಯಗಳ ನಡುವಿನ ಸೇತುವೆಯಾಗಿದೆ.

೮. ಭಾಷಾಂತರವು ಸಾಂಸ್ಕೃತಿಕ ಗಡಿಗಳನ್ನು ತಿಳಿಸುತ್ತದೆ.

೯. ಭಾಷಾಂತರವು ಭಾಷಾಂತರಕಾರನಿಗೆ ಮತ್ತು ಓದುಗನಿಗೆ ವೈಚಾರಿಕತೆಯನ್ನು ಬೆಳೆಸುತ್ತದೆ.

೧೦. ಭಾಷಾಂತರವು ಭಾಷಾಂತರಕಾರನನ್ನು ಸೃಜನಶೀಲ ಲೇಖಕನನ್ನಾಗಿ ಪರಿವರ್ತಿಸುತ್ತದೆ.

೧೧. ಭಾಷಾಂತರವು ಸಮಾಜದ ಎಲ್ಲಾ ಕ್ಷೇತ್ರಗಳಲ್ಲೂ ಉಪಯುಕ್ತವಾದುದಾಗಿದೆ.

೧೨. ಭಾಷೆ ಬೆಳವಣಿಗೆಗೆ ಭಾಷಾಂತರ ಉಪಯುಕ್ತವಾಗಿದೆ.

ಈ ಮೇಲಿನ ಪಟ್ಟಿಯಲ್ಲಿರುವ ಎಲ್ಲ ಅಂಶಗಳು ಭಾಷಾಂತರದ ಉಪಯುಕ್ತತೆಯ ಪ್ರಶ್ನೆಗೆ ಕಂಡುಕೊಂಡ ಫಲಿತಗಳಾಗಿದ್ದು, ಇಷ್ಟೆಲ್ಲ ಉಪಯುಕ್ತತೆಗಳಿದ್ದ ಮೇಲೆ ಭಾಷಾಂತರಕ್ಕೆ ತನ್ನದೇ ಆದ ಸ್ಥಾನಮಾನಗಳು ಇರಬೇಕು ಎಂಬ ಪ್ರಶ್ನೆಗೆ ದಾರಿ ಮಾಡಿಕೊಡುತ್ತದೆ. ಈ ಸ್ಥಾನಮಾನದ ಪ್ರಶ್ನೆಯನ್ನೆ ತೆಗೆದುಕೊಂಡು ಈ ಕೆಳಗಿನಂತೆ ಅಧ್ಯಯನ ಮುಂದುವರೆದಿದೆ.

## ೪.೩. ಸ್ಥಾನಮಾನದ ಪ್ರಶ್ನೆ

"ಭಾಷಾಂತರವೂ ಒಂದು ಸೃಜನಶೀಲ ಕಲೆ" ಎಂದೂ ಮತ್ತು "ಭಾಷಾಂತರ ಒಂದು ದ್ವಿತೀಯ ದರ್ಜೆಯ ಕಾರ್ಯ" ಎಂದೂ ಹೇಳಿರುವುದನ್ನು ನೋಡಿದರೆ ನಮಗೆ ಭಾಷಾಂತರದ ಸ್ಥಾನಮಾನದ ಪ್ರಶ್ನೆ ಏಳುತ್ತದೆ. ಆಧುನಿಕ ಯುಗದಲ್ಲಿ ಭಾಷಾಂತರ ಜಾಗತಿಕ ಮಟ್ಟದಲ್ಲಿ ಬೆಳೆಯುತ್ತಿರುವಾಗ ಕನ್ನಡದ ಭಾಷಾಂತರಕಾರರು, ಭಾಷಾಂತರ ಅಧ್ಯಯನ ಕೈಗೊಳ್ಳದಿದ್ದರೂ, ಅದರ ಸ್ಥಾನಮಾನದ ಬಗ್ಗೆ ಪ್ರತ್ಯೇಕವಾಗಿ ಮಾತನಾಡದಿದ್ದರು ಅವರು ಕೃತಿಗಳ ಭಾಷಾಂತರ ಸಂದರ್ಭಕ್ಕನುಗುಣವಾಗಿ ಅದರ ಸ್ಥಾನಮಾನವನ್ನು ಕುರಿತು ಚರ್ಚಿಸಿದ್ದಾರೆ, ಚಿಂತಿಸಿದ್ದಾರೆ. ಅವುಗಳಲ್ಲಿ ಪ್ರಮುಖ ಚಿಂತನೆಗಳನ್ನು ಹಿಂದಿನ ಮೂರನೇ ಅಧ್ಯಾಯದಲ್ಲಿ ಕ್ರೋಢೀಕರಿಸಲಾಗಿದ್ದು, ಅವುಗಳನ್ನು ವಿಶ್ಲೇಷಣೆಗೆ ಒಳಪಡಿಸುವುದರ ಮೂಲಕ ಭಾಷಾಂತರದ ಸ್ಥಾನಮಾನವನ್ನು ಕಂಡುಕೊಳ್ಳಬೇಕಾಗಿದ್ದು, ಆ ಪ್ರಕ್ರಿಯೆ ಈ ಕೆಳಗಿನಂತೆ ಸಾಗಿದೆ.

ಕೆಲವು ದಶಕಗಳ ಹಿಂದೆ ಭಾಷಾಂತರ ಎಂದರೆ ಶುದ್ಧ ಸಾಹಿತ್ಯದ ಭಾಷಾಂತರ ಎಂಬ ಅರ್ಥದಲ್ಲಿ ಬಳಕೆಯಲ್ಲಿತ್ತು. ಜನತೆಯನ್ನು ಅಕ್ಷರಸ್ಥರನ್ನಾಗಿ ಮಾಡುವುದಕ್ಕಾಗಿ ಇದು ಒಂದು ಹವ್ಯಾಸ ಅಥವಾ ಕಾಲ ತುಂಬಿಸುವ ಒಂದು ಸಾಧನ ಎಂಬ ಅರ್ಥ ಇದಕ್ಕೆ ಇತ್ತು. ರಾಮಚಂದ್ರದೇವರವರು ಒಂದೆಡೆ ಈ ಅಭಿಪ್ರಾಯ ವ್ಯಕ್ತಪಡಿಸಿದ್ದಾರೆ. "ಅನುವಾದ ನನ್ನ ಸೃಜನಶೀಲ ಬರವಣಿಗೆಗೆ, ಮಾರಕವಾದ ಬರವಣಿಗೆ ಅಥವಾ ಸ್ವಂತ ಬರವಣಿಗೆ ಸಾಧ್ಯವಾಗದ ಖಾಲಿ ದಿನಗಳನ್ನು ತುಂಬುವ ಕೆಲಸ."[೨] ಇವರ ಪ್ರಕಾರ ಭಾಷಾಂತರ ಎನ್ನುವಂತದ್ದು ಸ್ವಂತ ಬರವಣಿಗೆ ಸಾಧ್ಯವಾಗದ ಸಂದರ್ಭದಲ್ಲಿ ಖಾಲಿ ಕುಳಿತುಕೊಳ್ಳುವ ಬದಲು ಸಮಯವನ್ನು ವ್ಯರ್ಥಮಾಡುವುದರ ಬದಲು ಭಾಷಾಂತರ ಕಾರ್ಯದಲ್ಲಿ ತೊಡಗಿಸಿಕೊಂಡು, ಆ ಸಮಯವನ್ನು ಸದುಪಯೋಗಪಡಿಸಿಕೊಳ್ಳುವಂತದ್ದು, ಸೃಜನಶೀಲ ಬರವಣಿಗೆಗೆ ಪೂರಕವಾದದ್ದು ಎಂದು ಹೇಳಿರುವುದನ್ನು ನೋಡಿದರೆ ಅದು ದ್ವಿತೀಯ ದರ್ಜೆಯ ಸ್ಥಾನ ಪಡೆದುಕೊಂಡಿದೆ ಎಂಬುದಾಗಿ ತಿಳಿದುಬರುತ್ತದೆ.

ಆದರೆ ವಿಜ್ಞಾನ ಮತ್ತು ತಂತ್ರಜ್ಞಾನದ ಬೆಳವಣಿಗೆಯ ಈ ಹೊತ್ತಿನ ಸಂದರ್ಭದಲ್ಲಿ ಈ ಅಭಿಪ್ರಾಯಗಳು ಬದಲಾಗಿವೆ. ಇದು ಭಾಷಾಂತರದ ಸಾಂಸ್ಕೃತಿಕ ನೆಲೆಗಳು, ಒತ್ತಡಗಳು, ವೈವಿಧ್ಯತೆಯನ್ನು

ಪಡೆದುಕೊಂಡಿವೆ. ಭಾಷಾಂತರವು ಕಾನೂನು, ವಾಣಿಜ್ಯ, ಕೃಷಿ, ಕೈಗಾರಿಕೆ, ಆಡಳಿತ, ಶಿಕ್ಷಣ, ಆರೋಗ್ಯ, ದೂರದರ್ಶನ, ಚಲನಚಿತ್ರ ಮುಂತಾದ ವಲಯಗಳವರೆಗೂ ವ್ಯಾಪಿಸಿದೆ. ಇಂದು ಭಾಷಾಂತರ ಒಂದು ಕಾಲಹರಣದ ಅಥವಾ ಹವ್ಯಾಸದ ವೃತ್ತಿಯಾಗಿಲ್ಲ. ಇದು ಒಂದು ಶೈಕ್ಷಣಿಕ ಶಿಸ್ತಾಗಿ ಬೆಳೆದಿರುವುದರ ಜೊತೆಗೆ ಒಂದು ವಿದ್ಯೆಯಾಗಿ, ಒಂದು ಕುಶಲಕಲೆಯಾಗಿ ಬೆಳೆದಿದೆ. ಇಂದು ಸರ್ಕಾರಿ ಕಛೇರಿಗಳಲ್ಲಿ ಹಾಗೂ ಖಾಸಗಿ ಉದ್ಯಮಗಳಲ್ಲಿ ವೃತ್ತಿನಿರತ ಭಾಷಾಂತರಕಾರರು ಇದ್ದಾರೆ. ಒಂದೇ ಮಾತಿನಲ್ಲಿ ಹೇಳುವುದಾದರೆ ಇಂದು ಭಾಷಾಂತರ ಆಧುನಿಕ ಬದುಕಿನಲ್ಲಿ ಒಂದು ಬಹುಮುಖ್ಯವಾದ ಸ್ಥಾನ ಪಡೆದುಕೊಂಡಿದೆ.[೬೩] ಹಾಗಾಗಿ ಅದರ ಸ್ಥಾನಮಾನದ ಕುರಿತ ಚಿಂತನೆ ಇಂದು ಬಹುಮುಖ್ಯವಾಗಿದೆ.

ಪಾಶ್ಚಾತ್ಯರಲ್ಲಿ "ಭಾಷಾಂತರಕಾರರು ದ್ರೋಹಿಗಳು, ಭಾಷಾಂತರಕಾರರು ಹಂತಕರು ಮುಂತಾದ ಹೇಳಿಕೆಗಳು ಪ್ರಚಲಿತವಾಗಿವೆ. ಮೂಲತಃ ಇದೊಂದು ಇಟಾಲಿಯನ್ ಹೇಳಿಕೆ. ಈ ಹೇಳಿಕೆ ಎಷ್ಟರ ಮಟ್ಟಿಗೆ ನಿಜ? ಒಂದು ವೇಳೆ ನಿಜವಾಗಿದ್ದರು. ಅದು ಎಂತಹ ಭಾಷಾಂತರಕಾರರ ಕೈಯಲ್ಲಿ ಕೊಲೆಯಾಗಬಹುದು ಎಂದರೆ ಪ್ರತಿಭೆ, ವಿದ್ವತ್ತು, ಕೌಶಲ್ಯ, ಇಲ್ಲದವರ, ಭಾಷಾಂತರ ಪ್ರಕ್ರಿಯೆ ಅರಿಯದವರ ಕೈಯಲ್ಲಿ ಕೊಲೆಯಾಗಬಹುದು. ಇದನ್ನೆ ಸಿ.ಪಿ.ಕೆ.ಯವರು "ಪ್ರತಿಭೆ, ಕೌಶಲ್ಯವಿಲ್ಲದವರ ಕೈಯಲ್ಲಿ ಭಾಷಾಂತರವಿರಲಿ ಸ್ವಾತಂತ್ರ್ಯ ಕೃತಿಯೂ ಕೊಲೆಯೇ ಆಗಬಹುದು. ದಕ್ಷ ಭಾಷಾಂತರಕಾರ ಮೂಲದ ಕೊಲೆ ಮಾಡುವುದಿಲ್ಲ ಪುನರುತ್ಥಾನಗೊಳಿಸುತ್ತಾನೆ, ಪುನರ್ಜನ್ಮ ನೀಡುತ್ತಾನೆ."[೬೪]

ಅಂದರೆ ಕನ್ನಡ ಭಾಷಾಂತರಕಾರರು ಭಾಷಾಂತರವನ್ನು ಒಂದು ಉತ್ತಮ ಸ್ಥಾನದಲ್ಲಿ ಇಟ್ಟು ನೋಡಿದ್ದಾರೆ. ಕನ್ನಡ ಭಾಷಾಂತರಕಾರರ ಪ್ರಕಾರ ಪ್ರತಿಭೆ, ಕೌಶಲ್ಯವಿರುವಂತ ದಕ್ಷ ಭಾಷಾಂತರಕಾರ ಒಂದು ಕೃತಿಗೆ ಪುನರ್ಜನ್ಮ ನೀಡುತ್ತಾನೆ, ಪುನರುತ್ಥಾನಗೊಳಿಸುತ್ತಾನೆ. ಆದರೆ ಪ್ರತಿಭೆ, ಕೌಶಲ್ಯವಿಲ್ಲದವನ ಕೈಯಲ್ಲಿ ಭಾಷಾಂತರವಿರಲಿ ಸ್ವಾತಂತ್ರ್ಯ ಕೃತಿಯು ಸಹ ಕೊಲೆಯಾಗುತ್ತದೆ ಎಂದು ಹೇಳಿದರೆ ತಪ್ಪಾಗಲಾರದು. ಆದುದ್ದರಿಂದ ದಕ್ಷ ಭಾಷಾಂತರಕಾರ ಮಾಡುವ ಭಾಷಾಂತರ ಒಂದು ಕೃತಿಗೆ ಪುನರ್ಜನ್ಮ ನೀಡುತ್ತದೆ, ಪುನರುತ್ಥಾನಗೊಳಿಸುತ್ತದೆ. ಇದನ್ನೆ ಕೀರ್ತಿನಾಥ ಕುರ್ತಕೋಟಿಯವರು ಬಯಲು ಆಲಯದಲ್ಲಿ ಪ್ರಾಚೀನ ಸಾಹಿತ್ಯವನ್ನು ಭಾಷಾಂತರ ಎಂದು ಹೇಳುವಾಗ ಅದು ಪುನರ್‌ಸೃಷ್ಟಿ, ಪುನರ್‌ಲೇಖ ಎಂದು ಹೇಳಿರುವುದನ್ನು ಗಮನಿಸಬಹುದು. ಅಂದರೆ ಭಾಷಾಂತರ ಒಂದು ಪುನರ್‌ಸೃಷ್ಟಿಯ ಕಾರ್ಯ, ಭಾಷಂತರಕಾರ ಪುನರ್ಜನ್ಮ ನೀಡುವವನು ಎಂದು ಹೇಳಬಹುದು.

ಇದನ್ನೆ ದೇ.ಜ.ಗೌ.ರವರು "ಭಾಷಾಂತರವೊಂದು ಪುನರ್‌ಸೃಷ್ಟಿಯ ಕಾರ್ಯ ನಿಜ. ಆದರೆ ಅದು ಸ್ಫೂರ್ತಿಯ ಸೆಲೆಯೊಡೆದಾಗ ಲೀಲಾಜಾಲವಾಗಿ ಹೊನಲಿಡುವ ಪ್ರತಿಭಾಧಾರೆಯಲ್ಲ, ಮೂಲ ಕೃತಿಕಾರ ಮತ್ತು ಭಾಷಾಂತರಕಾರರು ಪರಸ್ಪರ ಹೃದಯ ಸಂವಾದ ಹಾಗೂ ಬೌದ್ಧಿಕ ಸಂಘರ್ಷಗಳಿಂದ ಹೊರಹೊಮ್ಮುವ ಮಿಂಚಿನಲೆಗಳು. ಅದೊಂದು ನವೀನ ಸೃಷ್ಟಿ"[೬೫] ಎಂದು ಹೇಳಿದ್ದನ್ನು ಗಮನಿಸಿದಾಗ

ನನಗೆ ಭಟ್ಟತೌತನು ಕಾವ್ಯ ಕೌತುಕದಲ್ಲಿ ಹೇಳಿದ "ಪ್ರಜ್ಞಾನವನವೋನ್ಮೇಷಶಾಲಿನೀ ಪ್ರತಿಭಾ ಮತಾತದನು ಪ್ರಾಣಾನಾರ್ಜಿವದ್ವರ್ಣನಾ ನಿಪುಣಃ ಕವಿಃತಸ್ಯ ಕರ್ಮ ಸ್ಮೃತಂ ಕಾವ್ಯಂ''[೬೧] ಎಂಬ ಪ್ರಸಿದ್ಧವಾದ ಮಾತೊಂದು ನೆನಪಾಗುತ್ತದೆ. ಇದರ ಅರ್ಥ ಹೊಸ ಹೊಸದನ್ನು ಕಾಣುವ ಪ್ರಜ್ಞೆಯೇ ಪ್ರತಿಭೆ, ಅದನ್ನು ಅನುಸರಿಸಿ ವರ್ಣನೆ ಮಾಡುವ ನಿಪುಣನೇ ಕವಿ ಅಂತ ಕವಿಯ ಕರ್ಮವೇ ಕಾವ್ಯ. ಹೀಗೆ ಹೊಸ ಹೊಸ ಪ್ರಜ್ಞೆಯ ಪ್ರತಿಭೆಯಿಂದ ಸ್ಫೂರ್ತಿಯ ಸೆಲೆಯೊಡೆದಾಗ ಲೀಲಾಜಾಲವಾಗಿ ಹೊನಲಿಡುವ ಸೃಜನಶೀಲ ಸಾಹಿತ್ಯದ ಹಾಗೆ ಭಾಷಾಂತರ ಅಲ್ಲ. ಭಾಷಾಂತರವೆನ್ನುವುದು ಮೂಲ ಕೃತಿಕಾರ ಮತ್ತು ಭಾಷಾಂತರಕಾರರು ಪರಸ್ಪರ ಬೆರೆತು ಹೃದಯ ಸಂವಾದ ನಡೆಸುವಂತಹದ್ದು ಹಾಗೂ ಅವರಿಬ್ಬರ ನಡುವೆ ನಡೆಯುವ ಬೌದ್ಧಿಕ ಸಂಘರ್ಷಗಳಿಂದ ವೈಚಾರಿಕತೆಯಿಂದ ಹೊರಹೊಮ್ಮುವ ಮಿಂಚಿನಂತಹ ಅಲೆಗಳು ಇಲ್ಲಿ ಮೂಲಕೃತಿ ಮಿಂಚಿನಂತಿದ್ದರೆ ಭಾಷಾಂತರ ಅದರ ಅಲೆಗಳು ಇದ್ದಂತೆ ಹಾಗೆ ಮೂಲ ಕೃತಿ ಸೃಷ್ಟಿ, ಆದರೆ ಭಾಷಾಂತರ ನವೀನ ಸೃಷ್ಟಿ ಅಥವಾ ಪುನರ್‌ಸೃಷ್ಟಿ. ಇದರಿಂದ ತಿಳಿದುಬರುವುದೇನೆಂದರೆ ಭಾಷಾಂತರವೆನ್ನುವುದು ಮೂಲ ಕೃತಿಗೆ, ಸೃಜನಶೀಲ ಕೃತಿಗೆ ಸಮನಾಗಿ ನಿಲ್ಲುವಂತಹ ಸ್ಥಾನವಿಲ್ಲ. ಆದರೆ ಅದಕ್ಕೆ ತುಂಬ ಹತ್ತಿರಕ್ಕೆ ಹೋಗಿ ನಿಲ್ಲುವಂತಹ ಸ್ಥಾನ ಪಡೆದುಕೊಂಡಿದೆ.

ಇದನ್ನು ಇನ್ನು ಸ್ಪಷ್ಟವಾಗಿ ಕೆ.ಎಸ್.ನಿಸ್ಸಾರ್ ಅಹಮ್ಮದ್ ರವರು ತಮ್ಮ 'ಪಾಬ್ಲೊ ನೆರುಡ ಬರೀ ಮರ್ಯಾದಸ್ಥರೆ' ಎಂಬ ಭಾಷಾಂತರ ಕೃತಿಯಲ್ಲಿ ಹೀಗೆ ಹೇಳಿದ್ದಾರೆ. "ಭಾಷಾಂತರವೆಂದರೆ ವಿದ್ಯುದ್ ದೀಪದ ಗೈರು ಹಾಜರಿಯಲ್ಲಿ ಕತ್ತಲೆ ಅನುಭವಿಸುವುದರ ಬದಲು ಮೇಣದ ಬತ್ತಿಯಾದರೂ ಲಭ್ಯವಿದೆಯೆಂದು ಸಮಾಧಾನ ಪಡುವಂತೆ.''[೬೨] ಅಂದರೆ ಹೇಗೆ ರಾತ್ರಿಯ ಕತ್ತಲನ್ನು ಹೋಗಲಾಡಿಸಲು ವಿದ್ಯುದ್ ದೀಪವನ್ನು ಬಳಸುತ್ತೆವೆಯೋ ಹಾಗೆ ಅಜ್ಞಾನದ ಕತ್ತಲ್ಲನ್ನು ಹೋಗಲಾಡಿಸಲು ಸೃಜನಶೀಲ ಸಾಹಿತ್ಯ ಇದೆ. ಆದರೆ ಈ ವಿದ್ಯುದ್ ದೀಪದ ಗೈರುಹಾಜರಿಯಲ್ಲಿ ಈ ಕತ್ತಲೆಯನ್ನು ಹೋಗಲಾಡಿಸಲು ಪರ್ಯಾಯವಾಗಿ ಮೇಣದ ಬತ್ತಿಯನ್ನು ಹೇಗೆ ಹಚ್ಚಿ ಇಡುತ್ತೇವೆಯೋ ಹಾಗೆ ಸೃಜನಶೀಲ ಸಾಹಿತ್ಯದ ಗೈರು ಹಾಜರಿಯಲ್ಲಿ ಅಜ್ಞಾನವನ್ನು ಹೋಗಲಾಡಿಸಲು ಪರ್ಯಾಯವಾಗಿ ನಿರ್ಮಿಸಿಕೊಂಡ ಮಾರ್ಗವೇ ಭಾಷಾಂತರ. ಇದರಿಂದ ತಿಳಿಯುವುದೇನೆಂದರೆ ಸೃಜನಶೀಲ ಸಾಹಿತ್ಯ ರಚನೆಯಾಗದ ಸಂದರ್ಭದಲ್ಲಿ ಪರ್ಯಾಯವಾಗಿ ನಿರ್ಮಿಸಿಕೊಂಡ ಮಾರ್ಗ ಭಾಷಾಂತರ ಇದು ದ್ವಿತೀಯ ದರ್ಜೆಯ ಕಾರ್ಯ ಎಂಬುದು ಸ್ಪಷ್ಟವಾಗುತ್ತದೆ.

ಇನ್ನು ಗುರುಮೂರ್ತಿ ಪೆಂಡಕೂರು ತಮ್ಮ ತೆಲುಗು ಕಾವ್ಯಮಾಲೆ ಎನ್ನುವ ಭಾಷಾಂತರ ಕವನ ಸಂಕಲನದಲ್ಲಿ "ಅನುವಾದ ಕೇವಲ ಮೂಲಕೃತಿ ರಚನೆಯಷ್ಟೆ ಸೃಜನಶಿಲ ಕೆಲಸ. ಒಳ್ಳೆಯ ಅನುವಾದ ತನ್ನತ್ತಕ್ಕೆ ಗಮನ ಸೆಳೆಯುತ್ತದೆ. ಅದು ಸ್ಪಷ್ಟವಾದ ಮತ್ತು ಉತ್ತಮ ಗಾಜಿನಂತೆ ಪಾರದರ್ಶಕವಾಗಿದ್ದು, ಮೂಲದ ಅರ್ಥವಂತಿಕೆಯನ್ನು ಕಾಪಾಡಿಕೊಂಡು ಬರುತ್ತದೆ.''[೬೩] ಎಂದು ಹೇಳಿರುವುದನ್ನು ನೋಡಿದರೆ

ಭಾಷಾಂತರ ಗಾಜಿನಂತೆ ಪಾರದರ್ಶಕವಾದದ್ದು. ಗಾಜು ಹೇಗೆ ಪಾರದರ್ಶಕವಾಗಿದ್ದು ಅದು ನಮ್ಮ ಬಿಂಬವನ್ನು ಪ್ರತಿಬಿಂಬಿಸುತ್ತದೆಯೋ ಹಾಗೆ ಭಾಷಾಂತರವು ಮೂಲಕೃತಿಯ ಬಿಂಬವನ್ನು ಪ್ರತಿಬಿಂಬಿಸುವಂತಹದ್ದು. ಅಂದರೆ ಮೂಲದ ತಿರುಳನ್ನು, ಮೂಲದ ಆಶಯವನ್ನು ಪ್ರತಿಬಿಂಬಿಸುವಂತಹದ್ದು ಎಂಬುದಾಗಿ ತಿಳಿದುಬರುತ್ತದೆ.

ಡಿ.ಎಸ್.ಚೌಗಲೆಯವರು "ಸ್ವಂತ ರಚನೆ ನೈಸರ್ಗಿಕ ಹೆರಿಗೆ ಇದ್ದಂತಿದ್ದರೆ ಅನುವಾದ ಸಿಜೇರಿಯನ್ ಇದ್ದಂತೆ"[೩೯] ಎಂದು ಹೇಳಿದ್ದಾರೆ. ಅಂದರೆ ಭಾಷಾಂತರವೆನ್ನುವುದು ನೈಸರ್ಗಿವಾದದ್ದಲ್ಲ. ಅದು ಸಹಜ ಹೇರಿಗೆ ಸಾಧ್ಯವಾಗದ ಸಂದರ್ಭದಲ್ಲಿ ಬಳಸಬಹುದಾದ ಪರ್ಯಾಯ ಮಾರ್ಗ. ಸಿಜೇರಿಯನ್ ಹೇಗೋ ಹಾಗೆ ಸಹಜವಾದ ಸ್ವಂತ ರಚನೆ ಸಾಧ್ಯವಾಗದ ಸಂದರ್ಭದಲ್ಲಿ ಪರ್ಯಾಯ ಮಾರ್ಗವಾಗಿ ಭಾಷಾಂತರವನ್ನು ಮಾಡಲಾಗುತ್ತದೆ ಎಂದು ಅದಕ್ಕೆ ದ್ವಿತೀಯ ದರ್ಜೆಯ ಸ್ಥಾನವನ್ನು ನೀಡಿರುವುದನ್ನು ಗಮನಿಸಬಹುದು.

ಆದರೆ ದೇ.ಜ.ಗೌ.ರವರು "ಭಾಷಾಂತರ ಸೋಮಾರಿಗಳ ಕೆಲಸವಲ್ಲ ಅದು ಪ್ರತಿಭಾವಂತರು ಕೈಗೊಳ್ಳಬೇಕಾದ ಕಾರ್ಯ."[೪೦] ಎಂದು ಹೇಳಿರುವುದನ್ನು ನೋಡಿದರೆ ಭಾಷಾಂತರ ದ್ವಿತೀಯ ದರ್ಜೆಯ ಕಾರ್ಯ ನಿಜ. ಆದರೆ ಸೋಮಾರಿಗಳ ಕೆಲಸವಲ್ಲ. ಪ್ರತಿಭಾವಂತರು ಕೈಗೊಳ್ಳಬೇಕಾದ ಕಾರ್ಯ ಅಂಧರೆ. ಸೃಜನಶೀಲರು ಪ್ರತಿಭಾವಂತರು, ಎರಡೂ ಭಾಷೆಗಳಲ್ಲಿ ಪಾಂಡಿತ್ಯ ಪಡೆದವರು ಕೈಗೊಳ್ಳಬೇಕಾದ ಕಾರ್ಯ ಎಂಬುದು ಸ್ಪಷ್ಟವಾಗುತ್ತದೆ. ಇದೆಲ್ಲವನ್ನು ಗಮನಿಸಿದಾಗ ಎನ್.ಪಿ.ಶಂಕರ ನಾರಾಯಣರಾವ್‌ರವರು ಹೇಳಿದ ಈ ಚಿಂತನೆ ನನ್ನ ಕಣ್ಣ ಮುಂದೆ ಬರುತ್ತದೆ.

"ಅನುವಾದವು ಮೂಲ ಕೃತಿಗಿಂತಲೂ ಮತ್ತು ಅನುವಾದಕನು ಮೂಲ ಕರ್ತೃವಿಗಿಂತಲೂ ಕಳಪೆ ಎಂಬ ಭಾವನೆ ದೂರವಾಗಿ ಅನುವಾದಕನು ಎರಡು ಕಾಲಾವಧಿಗಳ ನಡುವೆ ಎರಡು ಸಂಸ್ಕೃತಿಗಳ ನಡುವೆ ಎರಡು ಹೃದಯಗಳ ನಡುವೆ ಸ್ನೇಹಪೂರ್ಣ ಸಂಪರ್ಕವನ್ನು ಕಲ್ಪಿಸುವ ಸಾಂಸ್ಕೃತಿಕ ರಾಯಭಾರಿ ಎಂಬ ಸಂಗತಿಗೆ ಮಾನ್ಯತೆ ದೊರೆಯಬೇಕು."[೪೧] ಎಂದು ಹೇಳಿರುವುದನ್ನು ಗಮನಿಸಿದಾಗ ಭಾಷಾಂತರ ದ್ವಿತೀಯ ದರ್ಜೆಯ ಕಾರ್ಯವಾದರೂ ಮೂಲಕೃತಿಗಿಂತಲೂ ಮೂಲ ಕರ್ತೃವಿಗಿಂತಲೂ ಕಳಪೆಯೇನಲ್ಲ. ಅಂದರೆ ಮೂಲಕ್ಕೆ ಹತ್ತಿರವಾಗಿ ಭಾಷಾಂತರಕಾರನು ಎರಡು ಕಾಲಾವಧಿಗಳ ನಡುವೆ, ಎರಡು ಸಂಸ್ಕೃತಿಗಳ ನಡುವೆ, ಎರಡು ಹೃದಯಗಳ ನಡುವೆ ಸಂಪರ್ಕವನ್ನು ಬೆಳೆಸಯುವುದರ ಮೂಲಕ ಉನ್ನತ ಸ್ಥಾನವನ್ನು ಪಡೆದುಕೊಂಡಿದ್ದಾನೆ ಎಂಬುದಾಗಿ ತಿಳಿದುಬರುತ್ತದೆ.

ಈ ಮೇಲಿನ ಎಲ್ಲಾ ಅಂಶಗಳನ್ನು ಗಮನಿಸಿದಾಗ ತಿಳಿದುಬರುವ ಸಂಗತಿಗಳನ್ನು ಈ ಕೆಳಗಿನಂತೆ ಪಟ್ಟಿ ಮಾಡಬಹುದು.

೧. ಸೃಜನಶೀಲ ಲೇಖಕನಿಗೆ ಇರಬೇಕಾದ ಎಲ್ಲಾ ಅರ್ಹತೆಗಳು ಭಾಷಾಂತರಕಾರನಿಗೆ ಇರಬೇಕು ಎಂದು ಬಯಸಿದರೂ ಅವನನ್ನು ಸೃಜನಶೀಲ ಲೇಖಕನೆಂದು ಒಪ್ಪಿಕೊಳ್ಳಲು ಸಾಧ್ಯವಾಗುತ್ತಿಲ್ಲ.

೨. ಸೃಜನಶೀಲ ಸಾಹಿತ್ಯ ರಚನೆ ಸಾಧ್ಯವಾಗದ ಸಂದರ್ಭದಲ್ಲಿ ಅದರ ಸ್ಥಾನವನ್ನು ಭಾಷಾಂತರ ತುಂಬಿಕೊಡುತ್ತದೆ. ಅಂದರೆ ಭಾಷಾಂತರ ಸೃಜನಶೀಲ ಸಾಹಿತ್ಯಕ್ಕೆ ಪರ್ಯಾಯವಾದ ಇನ್ನೊಂದು ಮಾರ್ಗವಾಗಿದೆ ಎಂಬುದು ತಿಳಿದುಬರುತ್ತದೆ.

೩. ಇಲ್ಲಿ ಭಾಷಾಂತರವನ್ನು ದ್ವಿತೀಯ ದರ್ಜೆಯ ಕಾರ್ಯ ಎನ್ನುತ್ತಾರೆಯೇ ಹೊರತು ಅದು ಕಳಪೆ ಎಂಬ ಭಾವನೆ ಯಾವ ಭಾಷಾಂತರಕಾರನಲ್ಲೂ ಕಂಡುಬರುವುದಿಲ್ಲ.

೪. ಪಾಶ್ಚಾತ್ಯರಂತೆ ಕನ್ನಡದಲ್ಲಿ ಭಾಷಾಂತರಕಾರರನ್ನು ದ್ರೋಹಿಗಳು, ಹಂತಕರು, ಮೋಸಗಾರರು ಎಂಬುದನ್ನು ಇಲ್ಲಿ ಪ್ರಸ್ತಾಪಿಸಿ, ಚರ್ಚಿಸುತ್ತಾರಾದರೂ ಅದನ್ನು ಒಪ್ಪುವುದಿಲ್ಲ. ಬದಲಾಗಿ ಭಾಷಾಂತರಕಾರರು ಮೂಲಕೃತಿಗೆ ಪುನರ್ಜನ್ಮ ನೀಡುತ್ತಾರೆ. ಪುನರುತ್ಥಾನಗೊಳಿಸುತ್ತಾರೆ ಎಂದಿರುವುದನ್ನು ಕಾಣಬಹುದು.

ಈ ರೀತಿಯಾಗಿ ಕನ್ನಡ ಭಾಷಾಂತರಕಾರರಲ್ಲಿ ಭಾಷಾಂತರ ಪ್ರಕ್ರಿಯೆಗೆ ಭಾಷಾಂತರಕಾರರಿಗೆ ಉತ್ತಮವಾದ ಸ್ಥಾನ ನೀಡಿರುವುದನ್ನು ಕಾಣಬಹುದಾಗಿದೆ.

## ೪.೪. ಕೊರತೆ ತುಂಬುವಿಕೆಯ ಸಲಕರಣೆಯಾಗಿ ಭಾಷಾಂತರ

ಆದಿಕಾಲದಿಂದಲೂ ಮಾನವ ತನಗೆ ಕೊರತೆ ಎನಿಸಿದ್ದನ್ನು ತುಂಬಿಕೊಳ್ಳಲು ಹಲವಾರು ಸಲಕರಣೆಗಳನ್ನು ಕಂಡುಹಿಡಿಯುತ್ತ, ಬಳಸುತ್ತ ಬಂದ. ಉದಾ : ಮಾನವ ಮೊದಲು ಅಲೆಮಾರಿಯಾಗಿದ್ದ, ಅವನು ತಾನು ಅಲೆಮಾರಿ ಎನ್ನುವ ಕೊರತೆಯನ್ನು ನೀಗಿಸಲು ಒಂದೆಡೆ ನೆಲೆನಿಂತ. ಅಲ್ಲಿಯೇ ಕೃಷಿ ಮಾಡಲು ಪ್ರಾರಂಭಿಸಿದ. ಹಾಗೆ ಹಸಿಮಾಂಸವನ್ನು ತಿನ್ನುತ್ತಿದ್ದವನು ಬೆಂಕಿಯನ್ನು ಕಂಡುಕೊಂಡು ಬೇಯಿಸಿ ತಿನ್ನಲು ಪ್ರಾರಂಭಿಸಿದ ಹೀಗೆ ಪ್ರಾರಂಭವಾದ ಮನುಷ್ಯನ ಆಲೋಚನೆಗಳು ಅವನಲ್ಲಿ ಇರುವ ಕೊರತೆಯನ್ನು ತುಂಬಿಕೊಡಲು ಸಲಕರಣೆಯಾದವು. ಹೀಗೆ ನಾಗರೀಕತೆ ಬೆಳೆದಂತೆಲ್ಲ ಅವನು ತಾನು ನೆಲೆನಿಂತ ಪ್ರದೇಶದಿಂದ, ಬೇರೆ ಬೇರೆ ಪ್ರದೇಶಗಳಿಗೆ ವ್ಯವಹಾರಕ್ಕಾಗಿ, ರಾಜ್ಯವಿಸ್ತರಣೆಗಾಗಿ, ಧರ್ಮ ಪ್ರಚಾರಕ್ಕಾಗಿ ಮುಂತಾದ ಹಲವಾರು ಕಾರಣಗಳಿಗಾಗಿ ದೂರ ದೂರದ ಪ್ರದೇಶಗಳಿಗೆ ಹೋಗಬೇಕಾಯಿತು. ಹೀಗೆ ಅಲ್ಲಿಗೆ ಹೋದಾಗ ಅಲ್ಲಿನ ಭಾಷೆ ಭಿನ್ನವಾಗಿದ್ದು, ಅವನಿಗೆ ಆ ಭಾಷೆ ಬಾರದೆ ಇರುವುದು ಕೊರತೆಯಾಗಿ ಕಾಡತೊಡಗಿತು. ಆಗ ಅವನು ಆ ಭಾಷೆಯನ್ನು ಕಲಿಯುವುದರೊಂದಿಗೆ ಭಾಷಾಂತರವನ್ನು ಕಂಡುಕೊಳ್ಳುವುದರ ಮೂಲಕ ತನ್ನಲ್ಲಿದ್ದ ಕೊರತೆಯನ್ನು ನೀಗಿಸಿಕೊಳ್ಳಲು ಸಲಕರಣೆಯಾಗಿ ಬಳಸಿಕೊಂಡ. ಈ ಭಾಷಾಂತರದ ಮೂಲಕ ಅವನು ಅನ್ಯಭಾಷೆಯಲ್ಲಿ ಇರುವ ಸಾಹಿತ್ಯ, ವಿಜ್ಞಾನ, ತಂತ್ರಜ್ಞಾನ, ಸಮಾಜ ವಿಜ್ಞಾನ ಮುಂತಾದ ಜ್ಞಾನಶಿಸ್ತುಗಳನ್ನು ತನ್ನದಾಗಿಸಿಕೊಂಡ.

ಈ ತೆರನಾಗಿ ಪ್ರಾರಂಭವಾದ ಭಾಷಾಂತರ ಕನ್ನಡದಲ್ಲೂ ಭಾಷೆ, ಸಾಹಿತ್ಯ, ವಿಜ್ಞಾನ, ತಂತ್ರಜ್ಞಾನ, ಸಮಾಜವಿಜ್ಞಾನ, ಶಿಕ್ಷಣ ಮುಂತಾದ ಹಲವಾರು ಕ್ಷೇತ್ರಗಳ ಜ್ಞಾನದ ಕೊರತೆಯನ್ನು ತುಂಬುವ ಸಲಕರಣೆಯಾಗಿ ಬಳಕೆಯಾಗುತ್ತಿದ್ದು, ಅದನ್ನು ತಿಳಿಯಲು ಭಾಷಾಂತರಕಾರರು, ಸೃಜನಶೀಲ ಭಾಷಾಂತರಕಾರರು, ವಿದ್ವಾಂಸರು, ಓದುಗರು ಮುಂತಾದವರು ಭಾಷಾಂತರ ಕೃತಿಗಳ ಮುನ್ನುಡಿ ಬೆನ್ನುಡಿಗಳಲ್ಲಿನ ಚಿಂತನೆಗಳನ್ನು ಬಳಸಿಕೊಳ್ಳಲಾಗಿದೆ.

ಕೀರ್ತಿನಾಥ ಕುರ್ತಕೋಟಿಯವರು ತಮ್ಮ ಬಯಲು ಆಲಯದಲ್ಲಿ "ಭಾಷಾಂತರವೆಂದರೆ ಎರಡು ಭಾಷೆಗಳ ನಡುವೆ ನಡೆಯುವ ವ್ಯವಹಾರ"[೪೨] ಎಂದು ಹೇಳಿದ್ದಾರೆ. ಇದನ್ನು ಗಮನಿಸಿದರೆ ಸಹಜವಾಗಿ ಎರಡು ಭಾಷಿಕ ಜನರು ಒಂದೆಡೆ ಸೇರಿದಾಗ ಅವರಿಗೆ ಅರಿವಿಲ್ಲದಂತೆ ಭಾಷಾಂತರ ಕಾರ್ಯದಲ್ಲಿ ತೊಡಗಿರುತ್ತಾರೆ. ಅವರ ದಿನನಿತ್ಯದ ವ್ಯವಹಾರದಲ್ಲಿ ಭಾಷಾಂತರವನ್ನು ಬಳಸುತ್ತಾರೆ. ಇದು ಇನ್ನೊಂದು ಭಾಷೆಯ ಜನರ ಜೊತೆ ವ್ಯವಹಾರ ನಡೆಸುವ ಕೊರತೆಯನ್ನು ನೀಗಿಸುತ್ತದೆ. ಭಾಷೆ ಭಾಷೆಗಳ ನಡುವೆ ಇರುವ ಅಡ್ಡಗೋಡೆಯನ್ನು ತೊಡೆದು ಹಾಕುತ್ತದೆ.

ಎಲ್ಲರಿಗೂ ತಿಳಿದಿರುವಂತೆಯೇ ಭಾಷಾಂತರವೆಂದರೆ ಎರಡು ಭಾಷೆಗಳನ್ನು ಎರಡು ಭಾಷಿಕ ಸಮುದಾಯಗಳನ್ನು ಒಂದುಗೂಡಿಸುವ ಒಂದು ಮಹತ್ವಪೂರ್ಣ ಸಾಂಸ್ಕೃತಿಕ ಕ್ರಿಯೆ. ಭಾಷಾಂತರಗಳ ಇತಿಹಾಸ ತಿಳಿಸುವಂತೆ ಅನೇಕ ಪ್ರಮುಖ ಚಾರಿತ್ರಿಕ ಘಟ್ಟಗಳಲ್ಲಿ ಭಾಷಾಂತರವು ಪ್ರಮುಖ ಪಾತ್ರವಹಿಸಿದೆ. ಒಂದು ಸಾಹಿತ್ಯಕ್ಕೆ ಹಾಗೂ ಸಮಾಜಕ್ಕೆ ನೂತನ ವೈಚಾರಿಕತೆಯ ದಿಕ್ಕನ್ನು ತೆರೆದಿದೆ. ಉದಾ : ನಾವು ಯುರೋಪಿನ ರೆನಸನ್ಸ್ (೧೫-೧೭ನೇ ಶತಮಾನಗಳು) ಕಾಲಖಂಡವನ್ನು ಮತ್ತು ಭಾರತದಲ್ಲಿ ೧೮-೧೯ನೇಯ ಶತಮಾನಗಳ ಅವಧಿಯನ್ನು ಪರಿಗಣಿಸಬಹುದು. ಎಲ್ಲಾ ಭಾರತೀಯ ಸಾಹಿತ್ಯಗಳಲ್ಲಿ ಮತ್ತು ಸಮಾಜಗಳಲ್ಲಾದಂತೆ ಕನ್ನಡ ಸಾಹಿತ್ಯ ಸಾಮಾಜಿಕ ಕ್ಷೇತ್ರಗಳಲ್ಲಿಯೂ ಆಧುನಿಕ ವಿಚಾರಗಳ ಅನುಭವಗಳ, ಸಾಹಿತ್ಯಿಕ ಪ್ರಭೇದಗಳ ಪ್ರವೇಶದಿಂದಾಗಿ ಸಾಹಿತ್ಯ ಮತ್ತು ಸಾಹಿತ್ಯೇತರ ಕ್ಷೇತ್ರಗಳಲ್ಲಿನ ಕೊರತೆಯನ್ನು ಭಾಷಾಂತರ ತುಂಬಿಕೊಟ್ಟಿತು.

ಭಾಷಾಂತರ ರಾಷ್ಟ್ರಗಳ ಮಧ್ಯೆ ಮತ್ತು ಗುಂಪುಗಳ ಮಧ್ಯೆ ಸಾಂಸ್ಕೃತಿಕ ವ್ಯವಹಾರಿಕ ಸಂಬಂಧಗಳನ್ನು ಬೆಳೆಸಲು ಸೇತುವೆಯಾಗಿ ಕಾರ್ಯನಿರ್ವಹಿಸುತ್ತದೆ. ಇದನ್ನೆ ಸಿ.ಎನ್.ರಾಮಚಂದ್ರನ್ ರವರು "ಅನುವಾದ ಕ್ರಿಯೆ ಒಂದು ಪ್ರಯೋಗ ಮಾತ್ರವಲ್ಲ ಅದು ಎರಡು ಭಾಷಿಕ ಸಮುದಾಯಗಳ ನಡುವೆ ಕಟ್ಟುವ ಸೇತುವೆ"[೪೩] ಎಂದು ಹೇಳಿದ್ದಾರೆ. ಅಂದರೆ ಹೇಗೆ ಸೇತುವೆ ಎರಡು ಪ್ರದೇಶಗಳ ಮಧ್ಯೆ ಇರುವ ಕಂದಕವನ್ನು ತುಂಬಿ ಅವುಗಳ ಮಧ್ಯೆ ಸಂಪರ್ಕವನ್ನು ಕಲ್ಪಿಸುವ ಸಲಕರಣೆಯಾಗಿದೆಯೋ ಹಾಗೆ ಭಾಷಾಂತರವೂ ಎರಡು ಭಾಷಿಕ ಸಮುದಾಯಗಳ ನಡುವೆ ಸಂಬಂಧವನ್ನು ಕಲ್ಪಿಸುವ ಕಂದಕವನ್ನು ಹೋಗಲಾಡಿಸುವ ಸಲಕರಣೆಯಾಗಿದೆ.

ಮಾರ್ಕಂಡಪುರಂ ಶ್ರೀನಿವಾಸರು ಹೇಳುವಂತೆ ಯಾವುದೇ ಒಂದು ಭಾಷೆಯ ಒಬ್ಬ ಕವಿ ತನ್ನ ಪ್ರತಿಭೆಯಿಂದಲೋ, ತನ್ನ ಭಾವನೆಗಳಿಂದಲೋ, ತನ್ನ ಭಾಷಾ ಶೈಲಿಯಿಂದಲೋ, ವೈಶಿಷ್ಟ್ಯಪೂರ್ಣವೂ ಪ್ರಭಾವಶಾಲಿಯೂ ಆದ ಕವಿಯಾಗಿದ್ದಲ್ಲಿ ಅಂಥ ಕವಿಯನ್ನು ಸಾಹಿತ್ಯದ ದೃಷ್ಟಿಯಿಂದ ಬೇರೆ ಭಾಷೆಯವರಿಗೆ ಪರಿಚಯಿಸುವುದು ತುಂಬಾ ಅಗತ್ಯ. ಇದರಿಂದ ಎರಡೂ ಕಡೆ ಸಾಹಿತ್ಯ ಚಿಂತನಾ ದೃಷ್ಟಿಯಿಂದ ಸಾಕಷ್ಟು ಪ್ರಯೋಜನವಾಗಬಹುದು.[೪೪] ಅಂದರೆ ಇಲ್ಲಿ ಭಾಷಾಂತರ ಎರಡು ಭಾಷೆಗಳಲ್ಲಿನ ಸಾಹಿತ್ಯಿಕ ಕೊರತೆಯನ್ನು ತುಂಬಿ ಕೊಡುವುದರ ಜೊತೆಗೆ ಚಿಂತನೆಯನ್ನು ಬೆಳೆಸಬಹುದು.

ಎಂ.ಎಂ.ಕಲಬುರ್ಗಿಯವರು ಗಳಗನಾಥರ ಕಾದಂಬರಿ ಸಂಪುಟದಲ್ಲಿ ಹೀಗೆ ಹೇಳಿದ್ದಾರೆ. "ಒಂದು ಸಂಸ್ಕೃತಿಯ ಸಾಹಿತ್ಯ ಇನ್ನೊಂದು ಸಂಸ್ಕೃತಿಯಲ್ಲಿ ಮೊದಲು ಪ್ರವೇಶಿಸುವುದು ಭಾಷಾಂತರದ ಮೂಲಕ. ಆಮೇಲೆ ಅದು ಭಾವಾಂತರ, ಸ್ವಾತಂತ್ರ್ಯ ಸಾಹಿತ್ಯಗಳಿಗೆ ದಾರಿ ಮಾಡಿಕೊಡುತ್ತದೆ"[೪೫] ಎಂದು ಹೇಳಿರುವುದನ್ನು ನೋಡಿದರೆ ಕನ್ನಡ ಸಾಹಿತ್ಯದ ಕೊರತೆಯನ್ನು ತುಂಬಲು ಪಾಶ್ಚಾತ್ಯರ ಸಾಹಿತ್ಯಿಕ ಮತ್ತು ಸಾಂಸ್ಕೃತಿಕ ಕೃತಿಗಳ ಭಾಷಾಂತರಗಳು ಸಲಕರಣೆಗಳಾದವು. ಅವು ಕನ್ನಡ ಸಾಹಿತ್ಯಕ್ಕೆ, ಭಾವಾಂತರ ಹೊಂದಿ ಆಧುನಿಕ ಕನ್ನಡ ಸಾಹಿತ್ಯದ ಪ್ರಕಾರಗಳಾದ ಕಾದಂಬರಿ, ಕಥೆ, ನಾಟಕ, ಕಾವ್ಯ, ಪ್ರಬಂಧ, ಹಾಸ್ಯ ಮತ್ತು ಸಾಹಿತ್ಯೇತರ ಪ್ರಕಾರಗಳಾದ ವಿಜ್ಞಾನ, ತಂತ್ರಜ್ಞಾನ, ಸಮಾಜವಿಜ್ಞಾನ ಮುಂತಾದ ಸ್ವಾತಂತ್ರ್ಯ ಕೃತಿಗಳ ರಚನೆಗೆ ದಾರಿ ಮಾಡಿಕೊಟ್ಟಿತು.

ಮಹಮ್ಮದ ಕುಳಾಯಿಯವರು ಭಾಷಾಂತರಿಸಿದ 'ರಂಗನೋ ಮಲೆ ಮಂಗನೋ' ಎಂಬ ಕಾದಂಬರಿಯಲ್ಲಿ ಡಾ.ವಾಮನ ನಂದಾವರ ಅವರು ಒಂದು ಸಂಸ್ಕೃತಿಯ ಕೃತಿ ಇನ್ನೊಂದು ಸಂಸ್ಕೃತಿಯಲ್ಲಿ ಭಾಷಾಂತರ ಗೊಳ್ಳುವುದರ ಮೂಲಕ ಮೂಲ ಭಾಷೆಯಿಂದ ಅದು ಉದ್ದಿಷ್ಟ ಭಾಷೆಯೊಳಗೆ ಅನಾವರಣಗೊಳ್ಳಲು ಸಾಧ್ಯವಾಗುತ್ತದೆ. ಅವರೇ ಹೇಳುವ ಹಾಗೆ "ಇಂತಹ ಕೃತಿಯೊಂದು ಸೋದರ ಭಾಷೆಯೊಂದಕ್ಕೆ ಅನುವಾದಗೊಂಡಾಗ ಕರ್ನಾಟಕ ಸಂಸ್ಕೃತಿಯ ಪರಂಪರೆಯಲ್ಲಿ ತುಳು ಸಂಸ್ಕೃತಿ ಅನಾವರಣಗೊಳ್ಳಲು ಸಾಧ್ಯವಾಗುತ್ತದೆ."[೪೬] ಹೀಗೆ ನಮ್ಮಲ್ಲಿನ ಸಾಂಸ್ಕೃತಿಕ ಕಾದಂಬರಿಗಳ ಕೊರತೆಯನ್ನು ಭಾಷಾಂತರಗಳು ತುಂಬಿಕೊಟ್ಟಿವೆ.

ಇನ್ನು ಎ.ಎನ್.ಮೂರ್ತಿರಾಯರು ಕನ್ನಡದಲ್ಲಿ ಮಕ್ಕಳ ಕಥೆಗಳ ಕೊರತೆ ಇರುವುದನ್ನು ಮನಗಂಡು 'ಹವಳದ ದ್ವೀಪ'ವನ್ನು ಕನ್ನಡಕ್ಕೆ ತಂದಿದ್ದಾಗಿ ಹೇಳಿದ್ದಾರೆ. ಅವರದೇ ಆದ ಮಾತಿನಲ್ಲಿ ತಿಳಿಸುವುದಾದರೆ "ಕನ್ನಡದಲ್ಲಿ ಬಾಲಕರ ಮನಸ್ಸನ್ನು ಸೆಳೆಯುವಂಥ ಪ್ರಯಾಣದ ಮತ್ತು ಸಾಹಸ ಕೃತ್ಯಗಳ ಕಥೆ ಪುಸ್ತಕಗಳು ಬಹಳ ವಿರಳ. ಈ ಕೊರತೆಯನ್ನು ಸ್ವಲ್ಪಮಟ್ಟಿಗಾದರೂ ನಿವಾರಣೆ ಮಾಡುವುದೇ ಈ ಪ್ರಯತ್ನದ ಉದ್ದೇಶ"[೪೭] ಎಂದು ಹೇಳುವ ಮೂಲಕ ಭಾಷಾಂತರ ಮಕ್ಕಳ ಕಥೆಗಳ ಕೊರತೆಯನ್ನು ತುಂಬುವ ಸಲಕರಣೆಯಾಗಿ ಬಳಕೆಯಾಗಿದೆ.

"ಭಾಷೆಯ ಅಂತರವನ್ನು ಮರೆಸದ ಭಾಷಾಂತರ ವ್ಯರ್ಥ" ಎಂದು ಕೀರ್ತಿನಾಥ ಕುರ್ತಕೋಟಿಯವರು, ಎನ್.ಎಸ್.ಲಕ್ಷ್ಮೀನಾರಾಯಣಭಟ್ಟರ 'ಚಿನ್ನದ ಹಕ್ಕಿ' ಎನ್ನುವ ಭಾಷಾಂತರ ಕವನ ಸಂಕಲನದ ಮುನ್ನುಡಿಯಲ್ಲಿ ಹೇಳಿದ್ದಾರೆ. ಅವರ ಪ್ರಕಾರ ಭಾಷಾಂತರ ಎನ್ನುವಂತದ್ದು ಎರಡು ಭಾಷೆಗಳ ನಡುವೆ ಬಹಳಷ್ಟು ಅಂತರವಿರುತ್ತದೆ. ಆ ಅಂತರವನ್ನು ಮರೆಸಬೇಕು, ಎರಡು ಭಾಷೆಗಳನ್ನು ಸಮಾನವಾಗಿರಿಸಬೇಕು. ಎಂಬುದಾಗಿದೆ. ಏಕೆ ಈ ಹೇಳಿಕೆ ನೀಡಿದ್ದಾರೆ ಎಂದರೆ ಅವರು ಇಲ್ಲಿ ಮಾತಾಡುತ್ತಿರುವುದು ಇಂಗ್ಲಿಷ್‌ನಿಂದ ಏಟ್ಸ್ ಕವಿಯ ಕವನ ಸಂಕಲನಗಳ ಭಾಷಾಂತರ ಕುರಿತು. ಆದುದ್ದರಿಂದ ಇಂಗ್ಲಿಷ್ ಮತ್ತು ಕನ್ನಡಗಳ ನಡುವೆ ಬಹಳಷ್ಟು ಅಂತರವನ್ನು ಭಾಷಾಂತರಕಾರರು, ಸೃಜನಶೀಲ ಲೇಖಕರು ನಿರ್ಮಿಸಿದ್ದಾರೆ. ಇಂಗ್ಲಿಷ್ ಶ್ರೇಷ್ಠವಾದ ಭಾಷೆ, ಸಮೃದ್ಧವಾದ ಭಾಷೆ, ಅದನ್ನು ಭಾಷಾಂತರಿಸುವುದು ಕಷ್ಟ. ಅದು ಯಜಮಾನ ಭಾಷೆ ಕನ್ನಡ ಅಧೀನ ಭಾಷೆ ಎಂಬೆಲ್ಲ ವಾದಗಳಿವೆ. ಅವುಗಳನ್ನು ಹೋಗಲಾಡಿಸಿ, ಈ ಅಂತರವನ್ನು ಮರೆಸದ ಭಾಷಾಂತರ ವ್ಯರ್ಥ ಎಂದು ಹೇಳಿದ್ದಾರೆ.

ಬಿ.ಎಂ.ಶ್ರೀ.ಯವರು ತಮ್ಮ ಇಂಗ್ಲಿಷ್ ಗೀತಗಳಲ್ಲಿ ಕಾಣಿಕೆ ಕಾವ್ಯದಲ್ಲಿ ಹೇಳಿದಂತೆ

"ಇವಳ ಸೊಬಗನವಳು ತೊಟ್ಟು
ನೋಡಬಯಸಿದೆ
ಅವಳ ತೊಡಿಗೆ ಇವಳಿಗಿಟ್ಟು
ಹಾಡಬಯಸಿದೆ."[೪೮]

ಭಾಷಾಂತರವೂ ಕೂಡುವ ಮತ್ತು ತೆಗೆದುಕೊಳ್ಳುವ ಪ್ರಕ್ರಿಯೆಯಾಗಿದ್ದು, ಆಯಾ ಭಾಷೆಯಲ್ಲಿನ ಕೊರತೆಗಳನ್ನು ತುಂಬುವ ಸಲಕರಣೆಯಾಗಿ ಬಳಕೆಯಾಗಿದೆ ಎಂಬುದು ತಿಳಿದುಬರುತ್ತದೆ.

ಇದರ ಜೊತೆಗೆ ಮೂಲ ಲೇಖಕ ಮತ್ತು ಓದುಗನ ನಡುವೆ ಸಂಬಂಧವನ್ನು ಕಲ್ಪಿಸುವ, ಇಬ್ಬರನ್ನು ಭಾಷಾಂತರ ಕೃತಿಯ ಮೂಲಕ ಭೇಟಿ ಮಾಡಿಸುವ ಸೇತುವೆಯಾಗಿ ಭಾಷಾಂತರ ಕಾರ್ಯನಿರ್ವಹಿಸುತ್ತದೆ. ಅದನ್ನು ಸಿ.ಎನ್ .ರಾಮಚಂದ್ರನ್ ರವರು "ಒಟ್ಟಾರೆ ಹೇಳುವುದಾದರೆ ನನಗೆ ನಿಷ್ಠನಾಗಿರು ಎಂಬ ಕೃತಿಯ ಆಗ್ರಹ ಮತ್ತು ನಾನು ಸುಲಭವಾಗಿ ಅರ್ಥಮಾಡಿಕೊಳ್ಳುವಂತಿರಬೇಕು ಎಂಬ ಓದುಗನ ಆಗ್ರಹ ಇವೆರಡರ ನಡುವೆ ನಾವು ಮಾಡಿಕೊಳ್ಳುವ ಬಗೆ ಬಗೆಯ ಒಪ್ಪಂದಗಳ ಹಾಗೂ ರಾಜಿಸೂತ್ರಗಳ ದಾಖಲೆಯೇ ಅನುವಾದ ಕ್ರಿಯೆ"[೫೦] ಎಂದು ಹೇಳಿರುವುದನ್ನು ನೋಡಬಹುದು.

ಈ ರೀತಿಯಾಗಿ ಭಾಷಾಂತರವು ಎರಡು ಭಾಷೆಗಳಲ್ಲಿನ, ಸಮಾಜಗಳಲ್ಲಿನ, ಸಮುದಾಯಗಳಲ್ಲಿನ, ಗುಂಪುಗಳಲ್ಲಿನ, ಸಂಸ್ಕೃತಿಗಳಲ್ಲಿನ ಕೊರತೆಯನ್ನು ತುಂಬುವ ಸಲಕರಣೆಯಾಗಿ ಬಳಕೆಯಾಗುವುದರ ಜೊತೆಗೆ, ಅದು ಮೂಲ ಲೇಖಕ ಮತ್ತು ಭಾಷಾಂತರಕಾರ ಭೇಟಿಯಾಗುವ ಸಂಧಿ ಬಿಂದುವಾಗಿದ್ದು, ಮೂಲ ಲೇಖಕ ಮತ್ತು ಓದುಗರ ನಡುವೆ ಸಂಪರ್ಕ ಕಲ್ಪಿಸುವ ಸೇತುವೆಯಾಗಿ ಕಾರ್ಯನಿರ್ವಹಿಸುತ್ತಿದೆ ಎಂಬುದಾಗಿ ತಿಳಿದುಬರುತ್ತದೆ.

ಈ ಮೇಲಿನ ಎಲ್ಲಾ ಅಂಶಗಳನ್ನು ಗಮನಿಸಿದಾಗ ತಿಳಿದುಬರುವ ಸಂಗತಿಗಳನ್ನು ಈ ಕೆಳಗಿನಂತೆ ಪಟ್ಟಿ ಮಾಡಬಹುದು.

೧. ಈಗಾಗಲೇ ಕನ್ನಡ ಸಾಹಿತ್ಯದಲ್ಲಿ ಕೊರತೆ ಇದೆ ಅದನ್ನು ನೀಗಿಸಲು ಭಾಷಾಂತರ ಒಂದು ಸಲಕರಣೆಯಾಗಿ ಕಾರ್ಯ ನಿರ್ವಹಿಸುತ್ತಿದೆ ಎಂಬುದಾಗಿ ತಿಳಿದುಬರುತ್ತದೆ.

೨. ಕನ್ನಡ ಸಾಹಿತ್ಯದಲ್ಲಿ ಯತೇಚ್ಛವಾಗಿ ಸಾಹಿತ್ಯಿಕ ಪ್ರಕ್ರಿಯೆ ನಡೆದಿದ್ದರೂ ಸಾಹಿತ್ಯಿಕ ಸತ್ವವನ್ನು ಸಮೃದ್ಧಿಯನ್ನು ಹೆಚ್ಚಿಸಿಕೊಳ್ಳಲು ಭಾಷಾಂತರ ಅವಶ್ಯಕವಾಗಿದೆ.

೩. ಭಾಷಾಂತರ ಎರಡು ಭಾಷೆ, ಎರಡು ಜನಾಂಗ, ಎರಡು ಸಮುದಾಯ, ಎರಡು ಸಂಸ್ಕೃತಿಗಳ ನಡುವೆ ಸೇತುವೆಯಂತೆ ಸಂಪರ್ಕ ಕಲ್ಪಿಸಿಕೊಡುತ್ತದೆ.

೪. ಎರಡು ಭಾಷೆಗಳ ನಡುವೆ ನಡೆಯುವ ವ್ಯವಹಾರಕ್ಕೆ ಭಾಷಾಂತರ ಮಧ್ಯವರ್ತಿಯಾಗಿ ಕಾರ್ಯನಿರ್ವಹಿಸುತ್ತದೆ.

೫. ಭಾಷಾಂತರ ಮೂಲ ಲೇಖಕ, ಕೃತಿ ಮತ್ತು ಓದುಗರ ಮಧ್ಯೆ ಸಂಪರ್ಕ ಕಲ್ಪಿಸುವ ಸೇತುವೆಯಾಗಿದೆ.

ಈ ರೀತಿಯಾಗಿ ಭಾಷಾಂತರವು ಸಮಾಜವೊಂದರ ಕೊರತೆಯನ್ನು ತುಂಬಿಸಿಕೊಡುವ ಸಲಕರಣೆಯಾಗಿ ಮತ್ತು ಸೇತುವೆಯಾಗಿ ಕಾರ್ಯನಿರ್ವಹಿಸಿರುವುದನ್ನು ಕಾಣಬಹುದಾಗಿದೆ.

## ೪.೫. ಪ್ರತಿಮಾತ್ಮಕ ಹೇಳಿಕೆಗಳ ಹಿಂದಿನ ಆಶಯ

ಪ್ರತಿಮೆ ಎಂದರೆ ಕಣ್ಣಿಗೆ ಕಟ್ಟುವಂತಿರುವ ಶಬ್ದ ಚಿತ್ರಗಳು, ವಸ್ತು, ಕ್ರಿಯೆ ಮತ್ತು ಅಮೂರ್ತ ಆಲೋಚನೆ, ಭಾವನೆಗಳನ್ನು ವಿವರಣಾತ್ಮಕವಾಗಿ, ಮೂರ್ತವಾಗಿ ಭಾಷೆಯಲ್ಲಿ ವಿವರಿಸುವುದು ಮತ್ತು "ವಸ್ತುನಿಷ್ಠ ಪ್ರಪಂಚದ ವ್ಯಕ್ತಿನಿಷ್ಠ ಚಿತ್ರ" ಮನಸ್ಸಿನ ಚಟುವಟಿಕೆಗಳು ಅಂದರೆ ಸಂವೇದನೆ, ಗ್ರಹಿಕೆ, ಪರಿಕಲ್ಪನೆ ಇತ್ಯಾದಿಗಳು ಪ್ರಕಟರೂಪ. ಹಾಗೂ ಇಂದ್ರಿಯಗಳ ಗ್ರಹಿಕೆಯನ್ನು ಅಭಿವ್ಯಕ್ತಿಸುವ ಯಾವುದೇ ಪದ ಅಥವಾ ಪದಗಳ ಸಮೂಹ. ಅಂದರೆ, ಗಮನ ಸೆಳೆಯುವಂತೆ ಭಾಷೆ-ಉಪಮೆ, ರೂಪಕ, ಅಲಂಕಾರ, ಸಂಕೇತ ಇತ್ಯಾದಿ[೫೧] ಹಲವಾರು ಅರ್ಥಗಳನ್ನು ಓ.ಎಲ್.ನಾಗಭೂಷಣ ಸ್ವಾಮಿಯವರು ತಮ್ಮ ವಿಮರ್ಶೆಯ ಪರಿಭಾಷೆಯಲ್ಲಿ ನೀಡಿರುವುದನ್ನು ಕಾಣಬಹುದು.

ಹೀಗೆ ವಿಭಿನ್ನ ಅರ್ಥಗಳಿಂದ ಕೂಡಿದ ಪ್ರತಿಮೆಗಳ ಬಳಕೆ ನಮ್ಮ ಕನ್ನಡ ಪ್ರಾಚೀನ ಸಾಹಿತ್ಯದ ದಿಗ್ಗಜರಾದ ಪಂಪ, ರನ್ನ, ಪೊನ್ನ, ಜನ್ನರಿಂದ ಹಿಡಿದು ಆಧುನಿಕ ಸಾಹಿತ್ಯದ ಎಲ್ಲಾ ಸಾಹಿತಿಗಳು ಬರಹಗಾರರು ಯತೇಚ್ಛವಾಗಿ ಬಳಸಿರುವುದನ್ನು ಕಾಣಬಹುದು. ಅದರಲ್ಲೂ ಕುಮಾರವ್ಯಾಸನನ್ನು ರೂಪಕ ಸಾಮ್ರಾಜ್ಯ ಚಕ್ರವರ್ತಿ ಎಂದು, ಲಕ್ಷ್ಮೀಶನನ್ನು ಉಪಮಾಲೋಲ ಎಂದು ಕರೆದಿರುವುದನ್ನು ಗಮನಿಸಬಹುದು. ಅಲ್ಲದೆ ಕನ್ನಡಿಗರ ಮಾತುಗಳಲ್ಲಿ ಸಹಜವಾಗಿ ಪ್ರತಿಮೆಗಳು ಬಳಕೆಯಾಗುವುದನ್ನು

ಕಾಣಬಹುದು. ಈ ಎಲ್ಲದರ ಪ್ರಭಾವದಿಂದ ಕನ್ನಡ ಭಾಷಾಂತರಕಾರರು ಭಾಷಾಂತರ ಪ್ರಕ್ರಿಯೆಯನ್ನು ಕುರಿತು ಪ್ರತಿಮಾತ್ಮಕ ಹೇಳಿಕೆಗಳನ್ನು ನೀಡಿರುವುದನ್ನು ಗಮನಿಸಬಹುದು.

"ಸ್ವಾತಂತ್ರ್ಯ ಕಾವ್ಯದ ಪೈರು ಹುಟ್ಟುವುದಕ್ಕೆ ಮೊದಲು ನಡೆದಿರಬಹುದಾದ ಉಳುಮೆಯ ಕೆಲಸವೆ ತರ್ಜುಮೆ"[೫೨] ಡಿ.ವಿ.ಜಿ.ಯವರು ಈ ಹೇಳಿಕೆಯನ್ನು ನೋಡಿದರೆ ಸಾಹಿತ್ಯ ರಚನೆ ಎನ್ನುವಂತಹದು ಒಂದು ಕೃಷಿ ಇದ್ದಂತೆ ಕೃಷಿ ಮಾಡಬೇಕಾದರೆ ಉಳುಮೆ ಎಷ್ಟು ಮಹತ್ವದ ಪಾತ್ರವಹಿಸುತ್ತದೋ ಹಾಗೆ ಸಾಹಿತ್ಯ ರಚನೆಗೆ ಭಾಷಾಂತರ ಬಹು ಮಹತ್ವದ ಪಾತ್ರವಹಿಸುತ್ತದೆ. ಉಳುಮೆಯ ಸಂದರ್ಭದಲ್ಲಿ ಮಣ್ಣನ್ನು ಹದಮಾಡುವುದಿರಬಹುದು ಅಥವಾ ಮಣ್ಣನ್ನು ಬುಡಮೇಲು ಮಾಡುವುದಿರಬಹುದು. ಹೇಗೆ ಕೆಳಗಿನ ಫಲವತ್ತಾದ ಮಣ್ಣನ್ನು ಉಳುಮೆಯಿಂದ ಮೇಲೆ ತರುವ ಪ್ರಕ್ರಿಯೆ ನಡೆಯುತ್ತದೊ ಹಾಗೆ ಸಾಹಿತ್ಯ ಕೃಷಿಯಲ್ಲು ಹಿಂದಿನ, ಪ್ರಾಚೀನ ಸಾಹಿತ್ಯವನ್ನು ಆಧುನಿಕ ಜಗತ್ತಿಗೆ ಪರಿಚಯಿಸುವುದು ಉದಾ : ಬಿ.ಎಂ.ಶ್ರೀಯವರು ಮಹಾಭಾರತದ ಅಶ್ವಥಾಮನನ್ನು, ತಮ್ಮ 'ಅಶ್ವಥಾಮನ್' ನಾಟಕದ ಮೂಲಕ ಮೇಲೆ ತಂದು ನಿಲ್ಲಿಸುವುದು ಹಾಗೆ ಭಾಷಾಂತರದ ಉಳುಮೆ ಮಾಡುವುದರ ಮೂಲಕ ಸ್ವತಂತ್ರ್ಯ ಸಾಹಿತ್ಯದ ಬೆಳೆ ಬೆಳೆಯಬಹುದು. ಹೀಗೆ ಆಧುನಿಕ ಸಾಹಿತ್ಯದಲ್ಲಿ ಕಥೆ, ಕಾದಂಬರಿ, ನಾಟಕ, ಕಾವ್ಯ, ಪ್ರಬಂಧ ಮುಂತಾದ ಸಾಹಿತ್ಯ ಪ್ರಕಾರಗಳ ಬೆಳವಣಿಗೆಗೆ ಭಾಷಾಂತರ ಬಹುಮುಖ್ಯವಾದ ಪಾತ್ರವಹಿಸುವ ಮೂಲಕ ಉಳುಮೆಯ ಕಾರ್ಯವಾಗಿ ಪರಿಣಮಿಸಿದೆ.

ಇನ್ನು ಬೇಂದ್ರೆಯವರು ಭಾಷಾಂತರವನ್ನು "ನವಮೇಘ ರೂಪ ತಾಳುವ ಬಗೆ"[೫೩] ಎಂದಿದ್ದಾರೆ. ಬೇಂದ್ರೆಯವರ ಪ್ರಕಾರ ಭಾಷಾಂತರವೆಂದರೆ ಅದು ಮೇಘವಿದ್ದಂತೆ ಅದು ಹೇಗೆ ಹೊಸ ಹೊಸ ರೂಪಗಳನ್ನು ತಾಳುತ್ತ ಚಲಿಸುತ್ತದೋ ಹಾಗೆ ಭಾಷಾಂತರವೂ ಹೊಸ ಹೊಸ ರೂಪಗಳನ್ನು ರೂಪಾಂತರ, ಪುನರಸೃಷ್ಟಿ, ಸ್ಥಳೀಕರಣ, ಕನ್ನಡೀಕರಣ, ಅನುವಾದ, ಭಾಷಾಂತರ ಮುಂತಾದ ಹೊಸ ಹೊಸ ರೂಪಗಳನ್ನು ತಾಳುತ್ತ ಬಂದಿದೆ ಎಂದು ಆಗಿನ ಭಾಷಾಂತರ ಪ್ರಕ್ರಿಯೆಯನ್ನು ಕುರಿತು ಬೇಂದ್ರೆಯವರು ಹೇಳಿರುವುದನ್ನು ಗಮನಿಸಬಹುದಾಗಿದೆ.

ಇನ್ನು ಡಿ.ಎಸ್.ಚೌಗಲೆಯವರು "ಸ್ವಂತ ರಚನೆ ನೈಸರ್ಗಿಕ ಹೆರಿಗೆ ಇದ್ದಂತಿದ್ದರೆ ಅನುವಾದ ಸಿಜೇರಿಯನ್ ಇದ್ದಂತೆ"[೫೪] ಎಂದು ಹೇಳಿರುವುದನ್ನು ಗಮನಿಸಿದರೆ ಭಾಷಾಂತರ ಕ್ಲಿಷ್ಟ ಅದು ಸಹಜವಾದ ಸೃಜನಶೀಲ ಸಾಹಿತ್ಯದ ರಚನೆಯಂತಲ್ಲ ಸಹಜವಾದ ಸಾಹಿತ್ಯ ರಚನೆ ಸಾಧ್ಯವಾಗದ ಸಂದರ್ಭದಲ್ಲಿ ನಡೆಯುವಂತಹ ಪರ್ಯಾಯ ಮಾರ್ಗ. ಅಂದರೆ ಹೇಗೆ ನೈಸರ್ಗಿಕ ಹೆರಿಗೆ ಸಾಧ್ಯವಾಗದ ಸಂದರ್ಭದಲ್ಲಿ ಸಿಜೇರಿಯನ್ ಮಾಡಿಸುವರೊ ಹಾಗೆ ಭಾಷಾಂತರ ಎಂದು ಪ್ರತಿಮಾತ್ಮಕವಾಗಿ ಹೇಳಿರುವುದನ್ನು ನೋಡಬಹುದು.

ಭಾಷಾಂತರ ಕಠಿಣ, ಕ್ಲಿಷ್ಟವಾದ ಪ್ರಕ್ರಿಯೆ ಎಂದು ಹೇಳಲು ಜೋಸ್ಯುಲ ಸದಾನಂದ ಶಾಸ್ತ್ರಿಯವರು ಕೊಡುವ ಪ್ರತಿಮೆಯೆಂದರೆ "ಅನುವಾದವೆಂಬುದು ತಂತಿಯ ಮೇಲೆ ನಡುಗೆ, ಕತ್ತಿಯ ಮೇಲೆ ಸಾಮು, ಮೇಲೊಂದು ಭಾರ"[೫೫] ಎಂದಾಗಿದೆ. ಅಂದರೆ ಭಾಷಾಂತರವೆನ್ನುವುದು ಸುಲಭದ ಕೆಲಸವಲ್ಲ ಅದು ತಂತಿಯ ಮೇಲೆ ನಡೆದಂತೆ ಕಠಿಣವಾದದ್ದು. ಭಾಷಾಂತರ ಸಂದರ್ಭದಲ್ಲಿ ಸ್ವಲ್ಪ ಎಚ್ಚರ ತಪ್ಪಿದರೆ ಸಾಕು ವಿಮರ್ಶಕರ ಟೀಕೆಗೆ ಗುರಿಯಾಗುತ್ತಾರೆ. ಹಾಗೆ ಭಾಷಾಂತರ ಮಾಡುವುದು ಕತ್ತಿಯ ಮೇಲೆ ಸಾಮು ಮಾಡಿದಂತೆ, ಕತ್ತಿಯ ಮೇಲೆ ಸಾಮು ಮಾಡುವಾಗ ಎಷ್ಟು ಜಾಗ್ರತೆ ವಹಿಸುತ್ತಾರೊ ಹಾಗೆ ಭಾಷಾಂತರ ಮಾಡುವಾಗಲು ಬಹಳಷ್ಟು ಜಾಗ್ರತೆಯಿಂದ ಇರಬೇಕು. ಅಷ್ಟೇ ಅಲ್ಲದೆ ಭಾಷಾಂತರವೆನ್ನುವುದು ಭಾಷಾಂತರಕಾರ ಮೂಲ ಕೃತಿಯ ಭಾರವನ್ನೆಲ್ಲ ತನ್ನ ಮೇಲೆ ಹೊತ್ತುಕೊಂಡಂತೆ

ಇದನ್ನು ಸದಾನಂದ ಕನವಳ್ಳಿಯವರು ಪಾಶ್ಚಾತ್ಯರನ್ನು ಅನುಕರಿಸಿ ಅನುವಾದ ಸ್ತ್ರೀ ಇದ್ದಂತೆ ನಿಷ್ಠೆಳಿದ್ದರೆ, ಸುಂದರಳಿರುವುದಿಲ್ಲ. ಸುಂದರಳಿದ್ದರೆ, ನಿಷ್ಠಳಿರುವುದಿಲ್ಲ ಎಂಬ ವಿನೋದೋಕ್ತಿಯಿದೆ. ಭಾಷಾಂತರವೂ ಹಾಗೆಯೇ ಎರಡನ್ನೂ ಸರಿದೂಗಿಸುವುದು ತಂತಿಯ ಮೇಲೆ ನಡೆದಂತೆ"[೫೬] ಎಂದು ಹೇಳಿರುವುದನ್ನು ಗಮನಿಸುವಾಗ ಭಾಷಾಂತರವನ್ನು ಸ್ತ್ರೀಗೆ ಏಕೆ ಹೋಲಿಸಿದರು? ಸ್ತ್ರೀಗೂ ಭಾಷಾಂತರ ಪ್ರಕ್ರಿಯೆಗೂ ಏನು ಸಂಬಂಧ? ಮುಂತಾದ ಪ್ರಶ್ನೆಗಳು ಏಳಬಹುದು. ಆದರೆ ಇದೊಂದು ವಿನೋದೋಕ್ತಿಯಾಗಿರುವುದರಿಂದ ಅಷ್ಟುನೂ ಪ್ರಮುಖ್ಯತೆ ಪಡೆಯುವುದಿಲ್ಲ. ಇಲ್ಲಿನ ಸಮಾಜ ಪುರುಷ ಪ್ರಧಾನ ಸಮಾಜವಾಗಿರುವುದರಿಂದ, ಮತ್ತು ಸೌಂದರ್ಯ ಮತ್ತು ನಿಷ್ಠೆ ಸ್ತ್ರೀಯಲ್ಲೇ ಇರಬೇಕಾದ ಗುಣಗಳು ಎನ್ನುವಂತಹ ಮನೋಭಾವ ಇರುವುದರಿಂದ ಇಂತಹ ಪ್ರತಿಮೆಗಳು ಹುಟ್ಟಿಕೊಳ್ಳುತ್ತವೆ. ಇಲ್ಲಿ ಭಾಷಾಂತರವನ್ನು ದ್ವಿತೀಯ ದರ್ಜೆಯ ಪ್ರಕ್ರಿಯೆ ಎಂದು ತಿಳಿದಿರುವುದರಿಂದ, ಇಲ್ಲಿನ ಪುರುಷ ಪ್ರಧಾನ ಸಮಾಜವು ಸ್ತ್ರೀಯನ್ನು ದ್ವಿತೀಯ ದರ್ಜೆಯಲ್ಲಿಟ್ಟು ನೋಡಿರುವುದರಿಂದ ಇಂತಹ ಪ್ರತಿಮಾತ್ಮಕ ಹೇಳಿಕೆಗಳು ಮೂಡಿಬಂದಿವೆ. ಅಲ್ಲದೆ ಭಾಷಾಂತರವು ಮೂಲ ಮತ್ತು ಉದ್ದಿಷ್ಟ ಭಾಷೆಗಳ ನಡುವೆ ಸರಿದೂಗಿಸಿಕೊಂಡು ಹೋಗುವುದು ತಂತಿಯ ಮೇಲೆ ನಡೆದಂತೆ ಸ್ವಲ್ಪ ಎಚ್ಚರ ತಪ್ಪಿದರೂ, ನಿಯಂತ್ರಣ ತಪ್ಪಿದರೂ ಕೆಡುವ ಸಾಧ್ಯತೆ ಇದೆ ಎಂಬುದಾಗಿ ತಿಳಿಯಬಹುದಾಗಿದೆ.

ಕೀರ್ತಿನಾಥ ಕುರ್ತಕೋಟಿಯವರು ಬಯಲು ಆಲಯದಲ್ಲಿ ಭಾಷಾಂತರ ಕುರಿತು ಮಾತನಾಡುತ್ತ "ಭಾಷಾಂತರವೆಂದರೆ ಒಂದು ಮನೆಯ ಹೆಣ್ಣು ಮಗಳನ್ನು ಇನ್ನೊಂದು ದೇಶದ ಪ್ರದೇಶದ ಮನೆತನಕ್ಕೆ ಮದುವೆ ಮಾಡಿಕೊಡುವುದು."[೫೭] ಎಂಬ ಪ್ರತಿಮಾತ್ಮಕ ಹೇಳಿಕೆಯಲ್ಲಿ ಹೆಣ್ಣನ್ನು ಒಂದು ನಿಶ್ಚಿತವಾದ ಪಾತ್ರಕ್ಕೆ ಅಂದರೆ ಸೊಸೆ ಎನ್ನುವಂತ ಪಾತ್ರಕ್ಕೆ ಹೋಲಿಸಲು ಕಾರಣ. ಇಲ್ಲಿನ ಸಮಾಜದಲ್ಲಿ ಸೊಸೆ ಹುಟ್ಟಿದ ಮನೆಯನ್ನು ಬಿಟ್ಟು ಗಂಡನ ಮನೆಯಲ್ಲಿ, ಅಲ್ಲಿನ ಪರಿಸರಕ್ಕೆ, ವಾತಾವರಣಕ್ಕೆ ಹೊಂದಿಕೊಂಡು ಹೋಗಬೇಕು ಎಂಬ ಸಂಪ್ರದಾಯಿಕ ವಾದ ನಂಬಿಕೆ ಇದೆ, ಹಾಗೆಯೇ ಭಾಷಾಂತರವೂ ಮೂಲ ಭಾಷೆಯಿಂದ ಉದ್ದಿಷ್ಟ ಭಾಷೆಗೆ ಬಂದಾಗ ಉದ್ದಿಷ್ಟ ಭಾಷೆಯ ಜಾಯಮಾನಕ್ಕೆ ಹೊಂದಿಕೊಂಡು

ಹೋಗಬೇಕು ಎಂದು ಹೇಳಲು ಕಾರಣ ಕುರ್ತಕೋಟಿಯವರು ಇರುವುದು ಇಂತಹ ಸಂಪ್ರದಾಯಿಕವಾದ ಪರಿಸರದಲ್ಲಿ. ಆದುದರಿಂದ ಇಂತಹ ಪ್ರತಿಮಾತ್ಮಕ ಹೇಳಿಕೆ ಮೂಡಿಬರಲು ಸಾಧ್ಯವಾಗಿದೆ.

ಇನ್ನು ಸಿ.ಎನ್.ರಾಮಚಂದ್ರನ್ ರವರು "ಅನುವಾದ ಕ್ರಿಯೆ ಒಂದು ಪ್ರಯೋಗ ಮಾತ್ರವಲ್ಲ ಅದು ಎರಡು ಭಾಷಿಕ ಸಮುದಾಯಗಳ ನಡುವೆ ಕಟ್ಟುವ ಸೇತುವೆ"[೮] ಎಂದು ಪ್ರತಿಮಾತ್ಮಕವಾಗಿ ಹೇಳಿರುವುದು ಗಮನಿಸಿದರೆ ನಿಜ ಭಾಷಾಂತರ ಎನ್ನುವಂತಹದು ಎರಡು ಭಾಷೆಗಳ ನಡುವಿನ ಸೇತುವೆಯಂತೆ. ಹೇಗೆ ಸೇತುವ ಎರಡು ಪ್ರದೇಶಗಳಿಗೆ ಮಧ್ಯೆ ಇರುವ ಕಂದಕವನ್ನು ತುಂಬಿ ಆ ಎರಡು ಪ್ರದೇಶಗಳ ಮಧ್ಯೆ ಸಂಪರ್ಕವನ್ನು ಕಲ್ಪಿಸುತ್ತದೋ ಹಾಗೆ ಭಾಷಾಂತರವೂ ಎರಡು ಭಾಷೆಗಳ ನಡುವಿನ ಕಂದಕವನ್ನು ತುಂಬಿ ಎರಡು ಭಾಷೆ, ಸಂಸ್ಕೃತಿ, ಜನಾಂಗ, ಸಮುದಾಯಗಳ ನಡುವೆ ಸಂಪರ್ಕವನ್ನು ಕಲ್ಪಿಸುವ ಸೇತುವೆಯಾಗಿದೆ ಎಂಬುದು ಸ್ಪಷ್ಟವಾಗುತ್ತದೆ. ಭಾಷಾಂತರ ವಿಜ್ಞಾನದ ಪ್ರಯೋಗಗಳಂತೆ ಪ್ರಯೋಗ ಮಾತ್ರ ಅಲ್ಲ ಅದು ಪ್ರಯೋಗದ ಜತೆಗೆ ಸಂಬಂಧ ಸಂಪರ್ಕವನ್ನು ಬೆಸೆಯುವಂತದ್ದು.

ಕೆ.ಎಸ್.ನಿಸ್ಸಾರ್ ಅಹಮ್ಮದ್ ರವರು ತಮ್ಮ 'ಪಾಬ್ಲೊ ನೆರುಡ ಬರೀ ಮರ್ಯಾದಸ್ಥರೆ' ಎನ್ನುವ ಕೃತಿಯಲ್ಲಿ ಭಾಷಾಂತರವನ್ನು ಅದರ ಸ್ಥಾನವನ್ನು ಕುರಿತು ವಿದ್ಯುದ್ ದೀಪ ಮತ್ತು ಮೇಣದ ಭತ್ತಿಗಳನ್ನು ಪ್ರತಿಮಾತ್ಮಕವಾಗಿ ಬಳಸಿ ಹೀಗೆ ಹೇಳಿದ್ದಾರೆ. "ಭಾಷಾಂತರವೆಂದರೆ ವಿದ್ಯುದ್ ದೀಪದ ಗೈರುಹಾಜರಿಯಲ್ಲಿ ಕತ್ತಲೆ ಅನುಭವಿಸುವುದರ ಬದಲು ಮೇಣದ ಬತ್ತಿಯಾದರೂ ಲಭ್ಯವಿದೆಯೆಂದು ಸಮಾಧಾನ ಪಡುವಂತೆ"[೯] ಎಂದರೆ ಭಾಷಾಂತರ ಎನ್ನುವಂತದ್ದು, ವಿದ್ಯುದ್ ದೀಪದಂತಲ್ಲ ಅದು ಮೇಣದ ಬತ್ತಿಯಂತೆ. ಸೃಜನಶೀಲ ಸಾಹಿತ್ಯ ವಿದ್ಯುದ್ ದೀಪದ ಹಾಗೆ ಅಜ್ಞಾನದ ಕತ್ತಲೆಯನ್ನು ಹೋಗಲಾಡಿಸಲು ಹೆಚ್ಚಿನ ಬೆಳಕನ್ನು ಬೀರಿದರೆ ಭಾಷಾಂತರ ಅದರ ಗೈರುಹಾಜರಿಯಲ್ಲಿ ಅಂದರೆ ಸೃಜನಶೀಲ ಸಾಹಿತ್ಯ ರಚನೆ ನಡೆಯದ ಸಂದರ್ಭದಲ್ಲಿ ಕತ್ತಲೆಯನ್ನು ಹೋಗಲಾಡಿಸುವ ಸಲುವಾಗಿ ಬಳಸುವ ಪರ್ಯಾಯ ವಸ್ತುವಾದ ಮೇಣದ ಭತ್ತಿಯಂತೆ ಭಾಷಾಂತರ ಕಾರ್ಯನಿರ್ವಹಿಸುತ್ತದೆ ಎಂದು ಅದರ ಸ್ಥಾನವನ್ನು ಕುರಿತು ಪ್ರತಿಮಾತ್ಮಕವಾಗಿ ಹೇಳಿದ್ದಾರೆ.

ಈ ಮೇಲಿನ ಎಲ್ಲಾ ಪ್ರತಿಮಾತ್ಮಕ ಹೇಳಿಕೆಗಳನ್ನು ಗಮನಿಸಿದಾಗ ತಿಳಿದುಬರುವ ಅಂಶಗಳೆಂದರೆ

೧. ಭಾಷಾಂತರವನ್ನು ಮಹಿಳೀಕರಣಗೊಳಿಸುವ ಪ್ರಯತ್ನ ಕಂಡುಬರುತ್ತದೆ.

೨. ಭಾಷಾಂತರವನ್ನು ಅನುಬಂಧಿ ಸಂಗತಿಯಾಗಿ ಗ್ರಹಿಸಲಾಗುತ್ತದೆ.

೩. ಭಾಷಾಂತರವನ್ನು ಪೂರ್ವಸಿದ್ಧತಾ ಸಾಮಾಗ್ರಿಯಾಗಿ ಗ್ರಹಿಸಲಾಗುತ್ತದೆ.

ಮೇಲಿನ ಎಲ್ಲವೂ ಒಂದಲ್ಲ ಒಂದು ರೀತಿಯಲ್ಲಿ ಭಾಷಾಂತರವನ್ನು ಪರಿಧಿಯನ್ನು ಪರಿಭಾವಿಸುವುದಾಗಿದೆ.

ಅಡಿಟಿಪ್ಪಣಿ

೧. ಶಂಭಭಟ್ಟ(ಅನು), ೧೯೫೪, ತುಲಸಿದಾಸರ ಶ್ರೀರಾಮಚರಿತ ಮಾನಸ ಪ್ರಥಮ ಸೋಪಾನ ಪು.ಸಮರ್ಪಣೆ

೨. ಕರೀಗೌಡ ಬೀಚನಹಳ್ಳಿ(ಸಂ), ೧೯೯೯, ಭಾಷಾಂತರ ಸಾಂಸ್ಕೃತಿಕ ನೆಲೆಗಳು, ಪು.೩೦, ೩೧

೩. ಕುರ್ತಕೋಟಿ ಕೀರ್ತಿನಾಥ, ೧೯೯೮, ನೂರುಮರ ನೂರುಸ್ವರ, ಪು.೫

೪. ಕರೀಗೌಡ ಬೀಚನಹಳ್ಳಿ(ಸಂ), ೧೯೯೯, ಭಾಷಾಂತರ ಸಾಂಸ್ಕೃತಿಕ ನೆಲೆಗಳು, ಪು.೩೭

೫. ಶ್ರೀಕಂಠಯ್ಯ ಬಿ.ಎಂ., ೧೯೯೦, ಇಂಗ್ಲೀಷ್ ಗೀತೆಗಳು, ಪು.Vi

೬. ಮಾರ್ಕಂಡಪುರಂ ಶ್ರೀನಿವಾಸ(ಅನು), ೧೯೯೧, ಮಹಾಪ್ರಸ್ಥಾನ, ಪು. ಅನುವಾದಕರ ಮಾತು

೭. ಕುಲಕರ್ಣಿ ರಂ.ರಾ.(ರಂಗರಾಮ), ನಿಡಗುಂದಿ(ಅನು), ೧೯೯೬, ಬಾಳಲರಿಯನು ಬೀರುವು, ಪು.೬

೮. ಮಲ್ಲಿಕಾರ್ಜುನ ಸ್ವಾಮಿ ಜಿ.ಎಂ.(ಅನು), ೨೦೦೦, ಇಂಗ್ಲೀಷ್ ಕವನಗಳು, ಪು.ಹಿನ್ನುಡಿ

೯. ಶರಣಪ್ಪ ಜಿ.(ಅನು), ೨೦೦೪, ಸ್ಪರ್ಶ (ಭಾಷಾಂತರದ ಕಥೆಗಳು) ಪು.ಲೇಖಕರ ಮಾತು

೧೦. ನಾಗಣ್ಣ ಸಿ.(ಅನು), ೧೯೯೯, ಮನ ಮೆಚ್ಚಿದ ಕಥೆಗಳು, ಪು.ಬೆನ್ನುಡಿ

೧೧. ಮೋಹನ್ ಕುಂಟಾರ್(ಅನು), ೨೦೦೧, ವಾಸುದೇವನ ನಾಯರ್ ಕಥೆಗಳು, ಪು.ಅನುವಾದಕರ ಮಾತು

೧೨. ಶೇಷಿದ್ರಿ ಎಸ್.(ಅನು), ೧೯೯೫, ಮಹಾವೈದ್ಯನಾಥ ಅಯ್ಯರ್, ಪು.ಮುನ್ನುಡಿ

೧೩. ಮಿಜಿರ ಡಿ.ಆರ್.(ಅನು), ೨೦೦೫, ನಾರ್ಸಿಸಸ್ ಮತ್ತು ಗೋಲ್ಡಮಂಡ್, ಪು.ನನ್ನ ಮಾತು

೧೪. ನಿಸ್ಸಾರ ಅಹಮ್ಮದ್ ಕೆ.ಎಸ್ .(ಅನು), ೧೯೭೪, ಒಥೆಲೋ, ಪು.೨೪೪

೧೫. ಲಂಕೇಶ ಪಿ.(ಅನು), ೧೯೭೪, ಸೊಫೋಕ್ಲಿಸ್ ಮಹಾಕವಿಯ ದೊರೆ ಈಡಿಪಸ್ ಮತ್ತು ಅಂತಿಗೊನೆ, ಪು.ಅನುವಾದಕರ ಮಾತು

೧೬. ಸೀತಾರಾಮ್ಮಯ ವಿ.(ಅನು), ೧೯೮೨, ಮೋಬಿಡಿಕ್, ಪು.ಮುನ್ನುಡಿ

೧೭. ಗೋವಿಂದರಾಜು ಎಂ. ಗೀತಾಚಾರ್ಯ ನಾ.(ಅನು), ೨೦೦೪, ಕನ್ನಡ ತಿರುಕ್ಕುರಳ್, ಪು.xi

೧೮. ಪಾರ್ವತಿ ಜಿ., ಐತಾಳ (ಅನು), ೨೦೦೦, ದುರ್ಬೀಜ, ಪು.xiii

೧೯. ರಂಗಣ್ಣ ಎಸ್.ವಿ.(ಅನು), ೧೯೯೯, ಈಸ್ಕಿಲಸನ ತನಿ ಎರೆಯುವವರು, ಪು.ಮುನ್ನುಡಿ

೨೦. ಪಂಡಿತ ಸಿ. ಕೃಷ್ಣ, ೧೯೯೦, ಶಾಲೆಗಳಲ್ಲಿ ಕನ್ನಡ ಬೋಧನೆ, ಪು.೨೮೮

೨೧. ಮಾರ್ಕಂಡಪುರಂ ಶ್ರೀನಿವಾಸ(ಅನು), ೧೯೯೧, ಪೂರ್ವೋಕ್ತ, ಪು.ಅನುವಾದಕರ ಮಾತು

೨೨. ದೇ.ಜ.ಗೌ.(ಅನು), ೧೯೮೮, ಲಿಯೋಟಾಲ್ ಸ್ಟಾಯ್ ಅವರ ಯುದ್ಧ ಮತ್ತು ಶಾಂತಿ, ತೃತೀಯ ಸಂಪುಟ, ಪು.ಮುನ್ನುಡಿ

೨೩. ಲಕ್ಷ್ಮೀನಾರಾಯಣ ಭಟ್ಟ (ಅನು), ೧೯೯೯, ಚಿನ್ನದ ಹಕ್ಕಿ, ಪು.ಮುನ್ನುಡಿ

೨೪. ನಾವಡ ಎ.ವಿ.(ಸಂ), ೨೦೦೩, ಕನ್ನಡ ಅಧ್ಯಯನ ಮಳೆ ಸಂಚಿಕೆ, ಪು.೧೦೫

೨೫. ವೀಣಾಶಾಂತೇಶ್ವರ್ (ಅನು), ೨೦೦೧, ಯಕೃತ್ತು, ಪು.ಮುನ್ನುಡಿ

೨೬. ಸೀತಾರಾಮಯ್ಯ ವಿ.(ಅನು), ೧೯೮೨, ಮೋಬಿಡಿಕ, ಪು.ಮುನ್ನುಡಿ

೨೭. ಮೊಳಕಲ್ಮೂರು ಶ್ರೀನಿವಾಸಮೂರ್ತಿ(ಅನು), ೧೯೯೨, ಮುರಿದ ಹಕ್ಕಿಗಳು, ಪು.Viii

೨೮. ಬ್ಯಾಳಿ ಕೆ.ಬಿ.(ಅನು), ೧೯೯೭, ಕನ್ನಡಕ್ಕೆ ರುಬಾಯಿಗಳು, ಪು.೧೯

೨೯. ಪ್ರಧಾನ ಗುರುದತ್ತ, ೧೯೮೯, ಭಾಷಾಂತರ ಕಲೆ, ಪು.೨೪

೩೦. ನಾಗಭೂಷಣಸ್ವಾಮಿ ಓ.ಎಲ್., ೧೯೯೩, ಭಾಷಾಂತರ, ಪು.೭, ೮

೩೧. ಪ್ರಧಾನ ಗುರುದತ್ತ, ೧೯೮೯, ಪೂರ್ವೋಕ್ತ, ಪು.೨೭

೩೨. ನಾವಡ ಎ.ವಿ.(ಸಂ), ೨೦೦೩, ಪೂರ್ವೋಕ್ತ, ಪು.೭೦

೩೩. ಕರೀಗೌಡ ಬೀಚನಹಳ್ಳಿ(ಸಂ), ೧೯೯೯, ಭಾಷಾಂತರದ ಸಾಂಸ್ಕೃತಿಕ ನೆಲೆಗಳು, ಪು.ಮುನ್ನುಡಿ

೩೪. ಪ್ರಧಾನ ಗುರುದತ್ತ, ೧೯೮೯, ಪೂರ್ವೋಕ್ತ, ಪು.೭೨

೩೫. ದೇ.ಜ.ಗೌ., ೧೯೮೮, ಪೂರ್ವೋಕ್ತ, ಪು.ಮುನ್ನುಡಿ

೩೬. ತಿಪ್ಪೇರುದ್ರಸ್ವಾಮಿ ಎಚ್.(ಉಲ್ಲೇಖ), ೧೯೯೮, ತೌಲನಿಕ ಕಾವ್ಯಮೀಮಾಂಸೆ, ಪು.೧೨೫

೩೭. ನಿಸ್ಸಾರ್ ಅಹಮ್ಮದ್ ಕೆ.ಎಸ್.(ಅನು), ೨೦೦೩, ಪಾಬ್ಲೊ ನೆರುಡ ಬರೀ ಮರ್ಯಾದಸ್ಥರೆ, ಪು.ಅರಿಕೆ

೩೮. ಗುರುಮೂರ್ತಿ ಪೆಂಡಕೂರ(ಅನು), ೨೦೦೦, ತೆಲುಗು ಕಾವ್ಯಮಾಲೆ, ಪು.ಅನುವಾದಕರ ಮಾತು

೩೯. ನಾವಡ ಸ.ವಿ.(ಸಂ), ೨೦೦೩, ಪೂರ್ವೋಕ್ತ, ಪು.೭೩

೪೦. ಪ್ರಧಾನ ಗುರುದತ್ತ, ೧೯೮೯, ಪೂರ್ವೋಕ್ತ, ಪು.೩೮

೪೧. ನಾವಡ ಎ.ವಿ.(ಸಂ), ೨೦೦೩, ಪೂರ್ವೋಕ್ತ, ಪು.೬೦

೪೨. ಕುರ್ತಕೋಟಿ ಕೀರ್ತಿನಾಥ, ೧೯೯೭, ಬಯಲು ಆಲಯ, ಪು.೩೨

೪೩. ನಾವಡ ಎ.ವಿ.(ಸಂ), ಪೂರ್ವೋಕ್ತ, ಪು.೧೦೫

೪೪. ಮಾರ್ಕಂಡಪುರಂ ಶ್ರೀನಿವಾಸ(ಅನು), ೧೯೯೧, ಪೂರ್ವೋಕ್ತ, ಪು.ಅನುವಾದಕರ ಮಾತು

೪೫. ವೆಂಕಟೇಶ ತೀರಕೋ ಕುಲಕರ್ಣಿ(ಸಂ), ೧೯೯೯, ಗಳಗನಾಥರ ಕಾದಂಬರಿ ಸಂಪುಟ ಎರಡು, ಪು.ಗಳಗನಾಥರಿಗೆ ನಮಸ್ಕಾರ

೪೬. ಮಹಮ್ಮದ್ ಕುಳಾಯಿ(ಅನು), ೨೦೦೫, ರಂಗನೋ ಮಲೆ ಮಂಗನೋ, ಪು.ಮುನ್ನುಡಿ

೪೭. ಮೂರ್ತಿರಾವ್ ಎ.ಎನ್.(ಅನು), ಹವಳದ ದ್ವೀಪ, ಪು.ಅನುವಾದಕರ ಮಾತು

೪೮. ಲಕ್ಷ್ಮೀನಾರಾಯಣಭಟ್ ಎನ್.ಎಸ್.(ಅನು), ೧೯೯೯, ಚಿನ್ನದ ಹಕ್ಕಿ, ಪು.ಮುನ್ನುಡಿ

೪೯. ಬಿ.ಎಂ.ಶ್ರೀ (ಅನು), ೧೯೯೦, ಇಂಗ್ಲೀಷ್ ಗೀತೆಗಳು, ಪು.೩

೫೦. ನಾವಡ ಎ.ವಿ.(ಸಂ), ೨೦೦೩, ಪೂರ್ವೋಕ್ತ ಪು.೧೦೬

೫೧. ನಾಗಭೂಷಣಸ್ವಾಮಿ ಓ.ಎಲ್., ೧೯೯೮, ವಿಮರ್ಶೆಯ ಪರಿಭಾಷೆ, ಪು.೧೫೪

೫೨. ಪ್ರಧಾನ ಗುರುದತ್ತ, ೧೯೮೯, ಪೂರ್ವೋಕ್ತ, ಪು.೨೪

೫೩. ಕರೀಗೌಡ ಬೀಚನಹಳ್ಳಿ(ಸಂ), ೧೯೯೯, ಪೂರ್ವೋಕ್ತ, ಪು.೪೩

೫೪. ನಾವಡ ಎಂ.ವಿ.(ಸಂ), ೨೦೦೩, ಪೂರ್ವೋಕ್ತ ಪು.೭೩

೫೫. ಶಿವಕವಿ ಎನ್. ಶಿವನಗೌಡರು(ಅನು), ೧೯೯೭, ನಾಡಕವಿ ವೇಮಣ್ಣ, ಪು.ನನ್ನ ಮಾತು

೫೬. ನಾಡವ ಎ.ವಿ.(ಸಂ), ೨೦೦೩, ಪೂರ್ವೋಕ್ತ, ಪು.೧೦೦

೫೭. ಕುರ್ತಕೋಟಿ ಕೀರ್ತಿನಾಥ, ೧೯೯೨, ಪೂರ್ವೋಕ್ತ, ಪು.೩೨

೫೮. ನಾಡವ ಎ.ವಿ.(ಸಂ), ೨೦೦೩, ಪೂರ್ವೋಕ್ತ, ಪು.೧೦೫

೫೯. ನಿಸ್ಸಾರ್ ಅಹಮ್ಮದ್ ಕೆ.ಎಸ್., ೨೦೦೩, ಪೂರ್ವೋಕ್ತ, ಪು.ಅರಿಕೆ

# ೫

# ಸಮಾರೋಪ

ಭಾಷಾಂತರವನ್ನು ಕುರಿತು ಚಿಂತನೆ ಭಾಷಾಂತರ ಅಭ್ಯಾಸದಷ್ಟೇ ಹಳೆಯದು. ಒಂದು ಪ್ರಕ್ರಿಯೆಯನ್ನು ಕುರಿತ ಜ್ಞಾನ ಆ ಕ್ರಿಯೆಯಷ್ಟೇ ಪ್ರಾಚೀನವಾಗಿರುತ್ತದೆ. ಆದರೆ ಅದು ಒಂದು ಶಿಸ್ತಾಗಿ ಮಂಡಿತವಾಗಿರುವುದಿಲ್ಲ ಅಷ್ಟೇ. ಭಾಷಾಂತರ ಕ್ರಿಯೆ ಕುರಿತ ಜ್ಞಾನ ಭಾಷಾಂತರಕಾರರ ಮುನ್ನುಡಿ, ಬೆನ್ನುಡಿಗಳಲ್ಲಿ ಅವರ ಇತರೆ ಬರವಣಿಗೆಗಳಲ್ಲಿ ಮಂಡಿತವಾಗಿರುವುದನ್ನು ಈಗಾಗಲೇ ಅಧ್ಯಯನದಿಂದ ಕಂಡುಕೊಂಡಿದ್ದು, ಅವುಗಳನ್ನು ಕ್ರೋಢಿಕರಿಸಿ ವಿಶ್ಲೇಷಿಸುವುದರ ಮೂಲಕ ಒಂದು ಶಿಸ್ತಾಗಿ ನೋಡುವ ಕ್ರಿಯೆ ಇಲ್ಲಿ ನಡೆದಿದೆ.

ಈ ಸಂಶೋಧನೆಯ ಮೊದಲನೆಯ ಅಧ್ಯಾಯದಲ್ಲಿ ಅಧ್ಯಯನದ ಉದ್ದೇಶ, ವ್ಯಾಪ್ತಿ, ಸ್ವರೂಪ, ಮಹತ್ವ ಕುರಿತು ತಿಳಿಸಲಾಗಿದ್ದು, ಅಧ್ಯಯನದ ಉದ್ದೇಶದಲ್ಲಿ ಕನ್ನಡ ಭಾಷಾಂತರಕಾರರ ಭಾಷಾಂತರ ಕುರಿತ ಚಿಂತನೆಗಳನ್ನು ಕ್ರೋಢೀಕರಿಸಿ, ವಿಶ್ಲೇಷಣೆ ಮಾಡುವುದರ ಮೂಲಕ ಕನ್ನಡದಲ್ಲಿನ ಭಾಷಾಂತರ ಚಿಂತನೆಯನ್ನು ಕಂಡುಕೊಳ್ಳುವುದು ಸಾಧ್ಯ ಎನ್ನುವ ಉದ್ದೇಶವನ್ನು ಒಳಗೊಂಡಿದೆ. ಅಧ್ಯಯನದ ವ್ಯಾಪ್ತಿಯಲ್ಲಿ ಭಾಷಾಂತರಕಾರರ ಭಾಷಾಂತರ ಕೃತಿಗಳ ಮುನ್ನುಡಿ ಬೆನ್ನುಡಿಗಳಲ್ಲಿನ ಚಿಂತನೆಗಳನ್ನು ಮತ್ತು ಅವರ ಬರಗಳಲ್ಲಿನ ಚಿಂತನೆಗಳನ್ನು ಲಭ್ಯವಾದ ಕೃತಿಗಳನ್ನು ಮಾತ್ರ ನಿಬಂಧದ ವ್ಯಾಪ್ತಿಯಲ್ಲಿ ತಿಳಿಸಲಾಗಿದೆ. ಅಧ್ಯಯನದ ಸ್ವರೂಪದಲ್ಲಿ ಐದು ಅಧ್ಯಯನಗಳಾಗಿ ವಿಭಾಗಿಸಿದ್ದು, ನನ್ನ ಒಟ್ಟಾರೆ ಅಧ್ಯಯನದ ಸ್ವರೂಪವನ್ನು ತಿಳಿಸಲಾಗಿದೆ. ಅಧ್ಯಯನದ ಮಹತ್ವದಲ್ಲಿ ಪ್ರಸ್ತುತ ದಿನಮಾನಗಳಲ್ಲಿ ಭಾಷಾಂತರ ಕುರಿತ ಚಿಂತನೆಗಳ ಅಧ್ಯಯನದ ಮಹತ್ವವನ್ನು ತಿಳಿಸಲಾಗಿದೆ.

ಇನ್ನು ಎರಡನೇ ಅಧ್ಯಾಯ ಭಾಷಾಂತರ ಬೆಳೆದುಬಂದ ದಾರಿಯಲ್ಲಿ ಪಾಶ್ಚಾತ್ಯರಲ್ಲಿ, ಭಾರತದಲ್ಲಿ, ಕನ್ನಡದಲ್ಲಿ ಭಾಷಾಂತರ ಹೇಗೆ ಹುಟ್ಟಿ ಬೆಳೆದುಬಂದಿದೆ ಎಂಬುದನ್ನು ಕುರಿತು ವಿವರವಾದ ಮಾಹಿತಿ ಕಲೆಹಾಕಲಾಗಿದೆ. ಅದು ನನ್ನ ಮುಂದಿನ ಅಧ್ಯಯನಕ್ಕೆ ಸಹಾಯಕವಾಗಿದೆ.

ಮೂರನೆ ಅಧ್ಯಾಯದಲ್ಲಿ ಹಲವು ಪ್ರಮುಖ ಭಾಷಾಂತರಕಾರರ ಭಾಷಾಂತರ ಕುರಿತ ಚಿಂತನೆಗಳನ್ನು ಕ್ರೋಢಿಕರಿಸಲಾಗಿದ್ದು, ಅದು ನಾಲ್ಕನೇ ಅಧ್ಯಯನದ ವಿಶ್ಲೇಷಣೆಗೆ ಒಂದು ಮಾರ್ಗಸೂಚಿಯಾಗಿದೆ.

ನಾಲ್ಕನೇ ಅಧ್ಯಾಯದಲ್ಲಿ ಇಂದಿನ ದಿನಮಾನಗಳಲ್ಲಿ ಭಾಷಾಂತರ ಒಂದು ಮಹತ್ತರ ಕ್ಷೇತ್ರವಾಗುತ್ತಿರುವಾಗ ಭಾಷಾಂತರಕಾರರಲ್ಲಿ ಮೂಡಿಬಂದ ಚಿಂತನೆಗಳನ್ನು ಒಟ್ಟಾಗಿ ನೋಡಿ ವಿಶ್ಲೇಷಿಸುವುದು

ಆಗತ್ಯ. ಆಧುನಿಕ ಭಾಷಾಂತರಕಾರರು ಕಂಡುಕೊಂಡ ಭಾಷಾಂತರ ಚಿಂತನೆಗಳನ್ನು ಗುರುತಿಸಿ ವಿಶ್ಲೇಷಿಸುವುದರ ಮೂಲಕ ನನ್ನ ಉದ್ದೇಶ ಇಲ್ಲಿ ಸಾಕಾರಗೊಂಡಿದೆ.

ಕನ್ನಡದಲ್ಲಿ ವಿಭಿನ್ನ ಭಾಷಾಂತರಕಾರರು ವಿಭಿನ್ನ ಭಾಷೆಯ ಕೃತಿಗಳನ್ನು ಭಾಷಾಂತರಿಸುವಾಗ ಎದುರಾಗುವ ಮೂಲನಿಷ್ಠತೆಯ ಪ್ರಶ್ನೆ, ಉಪಯುಕ್ತತೆಯ ಪ್ರಶ್ನೆ, ಸ್ಥಾನಮಾನದ ಪ್ರಶ್ನೆಗಳನ್ನು ಹೇಗೆ ಅರ್ಥೈಸಿಕೊಂಡಿದ್ದಾರೆ ಎಂಬುದು ಅವರ ಮುನ್ನುಡಿ ಬೆನ್ನುಡಿಗಳ ಮೂಲಕ ಕಂಡುಕೊಳ್ಳುವ ಉದ್ದೇಶ ಇಲ್ಲಿ ಸಾಕಾರಗೊಂಡಿದ್ದು, ಮೂಲನಿಷ್ಠತೆಯ ಪ್ರಶ್ನೆಯಲ್ಲಿ ಮೂಲನಿಷ್ಠತೆ ಎಂದರೆ ಯಾವ ಹಂತದಲ್ಲಿ ಮೂಲಕ್ಕೆ ನಿಷ್ಠೆಯಾಗಿರಬೇಕು, ಮೂಲದ ವಸ್ತುವಿಗೆ ನಿಷ್ಠವಾಗಿರಬೇಕೆ? ಮೂಲದ ಶೈಲಿಗೆ ನಿಷ್ಠವಾಗಿರಬೇಕೆ? ಮುಂತಾದ ಪ್ರಶ್ನೆಗಳು ಕಾಡತೊಡಗಿದವು. ಆಗ ಮುನ್ನುಡಿ ಬೆನ್ನುಡಿಗಳನ್ನು ಪರಿಶೀಲಿಸಿ ನೋಡಿದಾಗ ಕನ್ನಡದಲ್ಲಿಯೂ ಭಾಷಾಂತರಕಾರರು ಮೂಲಕ್ಕೆ ಅತ್ಯಂತ ಅಥವಾ ಸಾಧ್ಯವಾದಷ್ಟು ನಿಷ್ಠವಾಗಿರಬೇಕೆಂಬ ಕಲ್ಪನೆ ಬೆಳೆಸಿಕೊಂಡಿರುವುದು ತಿಳಿದುಬಂದಿತು. "ಮೂಲ"ವು ಶ್ರೇಷ್ಠವಾದದ್ದು, ಪವಿತ್ರವಾದದ್ದು, ಭಾಷಾಂತರ ಅದಕ್ಕೆ ನಿಷ್ಠೆಯಿಂದ ಇರಬೇಕು ಎಂಬ ಧೋರಣೆ ಆಧುನಿಕ ಭಾಷಾಂತರಕಾರರಲ್ಲಿ ಕಂಡುಬರುತ್ತದೆ.

ಬಿ.ಎಂ.ಶ್ರೀ, ಕೀರ್ತಿನಾಥ, ಕುರ್ತಕೋಟಿ, ರಂ.ರಾ.ಕುಲಕರ್ಣಿ, ಪ್ರೊ.ಬಿ.ಎಂ.ನಿರಂಜನಮೂರ್ತಿ, ಮಾರ್ಕಂಡಪುರಂ ಶ್ರೀನಿವಾಸ, ಪ್ರೊ.ಜಿ.ಶರಣಪ್ಪ, ಸಿ.ನಾಗಣ್ಣ, ಶೇಷಾದ್ರಿ ಎಸ್., ಮೋಹನ್ ಕುಂಟಾರ್, ಡಿ.ಆರ್.ಮಿರ್ಜಿ, ಕೆ.ಎಸ್.ನಿಸ್ಸಾರ್ ಅಹಮ್ಮದ್ ಮುಂತಾದವರು ಮೂಲ ನಿಷ್ಠತೆಯ ಬಗ್ಗೆ ಮಾತನಾಡಿದ್ದರು. ಅವರು ಪಾಶ್ಚಾತ್ಯರಂತೆ ಮೂಲಕ್ಕೆ ಸಂಪೂರ್ಣವಾಗಿ ನಿಷ್ಠವಾಗಿರಬೇಕು ಎಂದು ಹೇಳುವುದಿಲ್ಲ. ಮೂಲ ನಿಷ್ಠತೆಯ ಜೊತೆಗೆ ಭಾಷಾಂತರಕಾರ ಸ್ವತಂತ್ರ್ಯವನ್ನು ವಹಿಸುವುದರ ಮೂಲಕ ತನ್ನ ಪ್ರತಿಭೆಯನ್ನು ತೋರಬೇಕು ಎಂದಿದ್ದರೆ. ಅಲ್ಲದೆ ಇವರು ಕಥೆ, ಕಾದಂಬರಿ, ನಾಟಕ, ಕಾವ್ಯ, ಅನುಭಾವಿ ಸಾಹಿತ್ಯ ಪ್ರಕಾರಗಳಲ್ಲಿ ಮೂಲನಿಷ್ಠತೆ ಕಠಿಣ ಎಂಬ ಅಭಿಪ್ರಾಯ ವ್ಯಕ್ತಪಡಿಸಿದ್ದಾರೆ. ಜೊತೆಗೆ ಆತ್ಮಚರಿತ್ರೆ, ಜೀವನ ಚರಿತ್ರೆ, ಪ್ರಬಂಧ, ಚರಿತ್ರೆ, ಮುಂತಾದವುಗಳಲ್ಲಿ ಮೂಲನಿಷ್ಠತೆ ಸಾಧ್ಯ ಎಂಬ ಅಭಿಪ್ರಾಯ ವ್ಯಕ್ತಪಡಿಸಿರುವುದನ್ನು ತಿಳಿಯುವುದರ ಮೂಲಕ ಮೂಲನಿಷ್ಠತೆಯ ಪ್ರಶ್ನೆಗೆ ಉತ್ತರವನ್ನು ಕಂಡುಕೊಳ್ಳಲಾಗಿದೆ.

ಉಪಯುಕ್ತತೆಯ ಪ್ರಶ್ನೆಯನ್ನು ಕುರಿತು ಭಾಷಾಂತರಕಾರರು ಮಾತನಾಡಿದ್ದು, ಯಾವ ಯಾವ ರೀತಿಯಲ್ಲಿ ಭಾಷಾಂತರವು, ಭಾಷೆಗೆ, ಜನಾಂಗಕ್ಕೆ ಸಮುದಾಯಕ್ಕೆ, ಸಮಾಜಕ್ಕೆ, ಸಂಸ್ಕೃತಿಗೆ, ಭಾಷಾಂತರ ಕಾರನಿಗೆ ಮತ್ತು ಓದುಗನಿಗೆ ಉಪಯುಕ್ತವಾಗಿದೆ ಎಂಬುದನ್ನು ಮಾರ್ಕಂಡಪುರಂ ಶ್ರೀನಿವಾಸ, ದೇ.ಜ.ಗೌ. ಕೀರ್ತಿನಾಥ ಕುರ್ತಕೋಟಿ, ಸಿ.ಎನ್.ರಾಮಚಂದ್ರನ್, ವೀಣಾಶಾಂತೇಶ್ವರ, ವಿ.ಸೀತಾರಾಮಯ್ಯ, ಮೊಳಕಾಲ್ಮೂರು ಶ್ರೀನಿವಾಸಮೂರ್ತಿ, ಕೆ.ಬಿ.ಬ್ಯಾಳಿ, ಡಿ.ವಿ.ಜಿ., ಓ.ಎಲ್.ನಾಗಭೂಷಣಸ್ವಾಮಿ, ಪ್ರಧಾನ

ಗುರುದತ್ತ ಮುಂತಾದವರು ನೀಡಿದ ಹೇಳಿಕೆಗಳ ಮೂಲಕ ಉತ್ತರವನ್ನು ಕಂಡುಕೊಳ್ಳಲಾಗಿದೆ. ಇವರೆಲ್ಲರ ಪ್ರಕಾರ ಭಾಷಾಂತರ ಸಮಾಜದ ಎಲ್ಲಾ ಕ್ಷೇತ್ರಗಳಲ್ಲೂ ಉಪಯುಕ್ತವಾದುದಾಗಿದೆ.

ಭಾಷಾಂತರಕಾರರು ತಮ್ಮ ಮುನ್ನುಡಿ ಬೆನ್ನುಡಿಗಳಲ್ಲಿ ಭಾಷಾಂತರದ ಸ್ಥಾನಮಾನದ ಪ್ರಶ್ನೆ ಎತ್ತಿದ್ದು, ನಾನು ಗಮನಿಸಿದಂತೆ ಕನ್ನಡ ಭಾಷಾಂತರಕಾರರು ಎಲ್ಲೂ ಅದನ್ನು ಕೆಳದರ್ಜೆಯ, ಕೀಳುಮಟ್ಟದ ಕಾರ್ಯ, ಕಳಪೆ ಎಂಬ ಭಾವ ವ್ಯಕ್ತವಾಗಿಲ್ಲ. ಎಲ್ಲಾ ಭಾಷಾಂತರಕಾರರಲ್ಲೂ ಭಾಷಾಂತರದ ಬಗ್ಗೆ ಒಳ್ಳೆಯ ಅಭಿಪ್ರಾಯಗಳೇ ಇವೆ. ಅವರು ಭಾಷಾಂತರವನ್ನು ಮಾಡುವವರು ಪ್ರತಿಭೆ, ಕೌಶಲ್ಯ, ವ್ಯುತ್ಪತ್ತಿ, ಪಾಂಡಿತ್ಯ ಮುಂತಾದ ಸೃಜನಶೀಲ ಲೇಖಕನಿಗಿರಬೇಕಾದ ಎಲ್ಲ ಅರ್ಹತೆಗಳು ಭಾಷಾಂತರಕಾರನಿಗೆ ಇರಬೇಕು ಎನ್ನುವುದನ್ನು ನೋಡಿದರೆ, ದಕ್ಷ ಭಾಷಾಂತರಕಾರ ಮೂಲದ ಕೊಲೆ ಮಾಡುವುದಿಲ್ಲ. ಪುನರುತ್ಥಾನಗೊಳಿಸುತ್ತಾನೆ. ಪುನರ್ಜನ್ಮ ನೀಡುತ್ತಾನೆ. ಭಾಷಾಂತರ ಪುನರ್ ಸೃಷ್ಟಿ, ಪುನರಲೇಖ ನವೀನ ಸೃಷ್ಟಿ ಎಂದು ಹೇಳಿರುವುದನ್ನು ನೋಡಿದರೆ ಇನ್ನು ಸ್ಪಷ್ಟವಾಗುತ್ತದೆ. ಆದರೆ ಯಾಕೋ ಏನೋ ಅವರು ಅದನ್ನು ಸೃಜನಶೀಲ ಸಾಹಿತ್ಯಕ್ಕೆ ಸಮನಾಗಿ ನೋಡಲು ಸಾಧ್ಯವಾಗುತ್ತಿಲ್ಲ. ಅದನ್ನು ದ್ವಿತೀಯ ದರ್ಜೆಯ ಕಾರ್ಯ ಎಂದೇ ಹೇಳಿದ್ದಾರೆ.

ಇನ್ನು ಭಾಷಾಂತರವನ್ನು ಸಮಾಜವೊಂದರ ಕೊರತೆಯನ್ನು ತುಂಬುವಿಕೆಯ ಸಲಕರಣೆಯಾಗಿ ನೋಡಲಾಗಿದ್ದು, ಅದು ಎರಡು ಭಾಷೆ, ಸಾಹಿತ್ಯ, ಸಮಾಜ, ಸಮುದಾಯ, ಜನಾಂಗ, ಸಂಸ್ಕೃತಿಗಳ ನಡುವಿನ ಸೇತುವೆಯಾಗಿ, ಅವುಗಳಲ್ಲಿನ ಕೊರತೆಯನ್ನು, ಕಂದಕವನ್ನು ತುಂಬುವ ಮೂಲಕ ಸಂಪರ್ಕವನ್ನು ಕಲ್ಪಿಸುತ್ತದೆ. ಅಲ್ಲದೆ ಭಾಷೆಗಳ ನಡುವಿನ ಅಂತರವನ್ನು ಭಾಷಾಂತರ ಮರೆಸುತ್ತದೆ. ಕೃತಿ ಮತ್ತು ಓದುಗ, ಮೂಲಲೇಖ ಮತ್ತು ಓದುಗರ ಮಧ್ಯ ಭಾಷಾಂತರ ಮಧ್ಯವರ್ತಿಯಾಗಿ ಇಬ್ಬರ ನಡುವೆ ಸಂಪರ್ಕವನ್ನು ಕಲ್ಪಿಸುವ ಸೇತುವೆಯಾಗಿ ಕಾರ್ಯ ನಿರ್ವಹಿಸಿದೆ. ಇದೆಲ್ಲವನ್ನು ಗಮನಿಸಿದಾಗ ಭಾಷಾಂತರ ಸಮಾಜವೊಂದರ ಕೊರತೆಯನ್ನು ತುಂಬಿಕೊಡುವ ಸಲಕರಣೆಯಾಗಿ ಹಾಗೂ ಸೇತುವೆಯಾಗಿ ಕಾರ್ಯ ನಿರ್ವಹಿಸಿರುವುದು ಸ್ಪಷ್ಟವಾಗುತ್ತದೆ.

ಇನ್ನು ಭಾಷಾಂತರವನ್ನು ಪ್ರತಿಮಾತ್ಮಕ ಹೇಳಿಕೆಗಳ ಹಿನ್ನೆಲೆಯಲ್ಲಿ ನೋಡಿದಾಗ ಪ್ರತಿಮೆ ಎಂಬುದು ಎಷ್ಟು ಪ್ರಭಾವಶಾಲಿ ಎಂಬುದು ಸ್ಪಷ್ಟವಾಗುತ್ತದೆ. ಭಾಷಾಂತರ ಪ್ರಕ್ರಿಯೆಯನ್ನು ಓದುಗರಿಗೆ ಮನಮುಟ್ಟುವಂತೆ ತಿಳಿಸಲು ಪ್ರತಿಮಾತ್ಮಕ ಹೇಳಿಕೆಗಳು ಬಹು ಉಪಯುಕ್ತವಾಗಿವೆ. ಭಾಷಾಂತರವನ್ನು ಒಂದು ಉಳುಮೆಯ ಕಾರ್ಯಕ್ಕೆ, ಒಬ್ಬ ಸ್ತ್ರೀಯ ಗುಣ ರೂಪಕ್ಕೆ, ಹೊಸ ಮನೆಗೆ ಬಂದ ಸೊಸೆಗೆ, ವಿದ್ಯುದ್ ದೀಪದ ಅನುಪಸ್ಥಿತಿಯಲ್ಲಿ ಬೆಳಕನ್ನು ನೀಡುವ ಮೇಣದ ಬತ್ತಿಗೆ ಹೀಗೆ ಹಲವಾರು ಪ್ರತಿಮೆಗಳನ್ನು ಬಳಸಿಕೊಂಡು ಹೇಳಿರುವುದು ಭಾಷಾಂತರ ಪ್ರಕ್ರಿಯೆಯನ್ನು ಸ್ಪಷ್ಟವಾಗಿ ತಿಳಿಯಲು ಸಾಧ್ಯವಾಗಿರದೆ, ಇಂಥ ಪ್ರತಿಮಾತ್ಮಕ ಹೇಳಿಕೆಗಳು ಪಾಶ್ಚಾತ್ಯರಲ್ಲಿ ಇದ್ದು, ಅವು ಭಾಷಾಂತರದ ಮೂಲಕ ಕನ್ನಡಕ್ಕೆ ಬಂದಿದ್ದರೂ ನಾವು ಇಲ್ಲಿ ಅವುಗಳನ್ನು ಬಳಸದೆ ಕನ್ನಡಿಗರೇ ಕಂಡುಕೊಂಡ ಹೇಳಿದ

ಪ್ರತಿಮಾತ್ಮಕ ಹೇಳಿಕೆಗಳನ್ನು ಇಲ್ಲಿ ವಿಶ್ಲೇಷಣೆಗೆ ಒಳಪಡಿಸಿದ್ದೇನೆ. ಏಕೆಂದರೆ ಇವು ಈ ನೆಲ, ಸಂಸ್ಕೃತಿ, ಸಂಪ್ರದಾಯಗಳನ್ನು ಒಳಗೊಂಡು ವ್ಯಕ್ತಗೊಂಡ ಅಭಿಪ್ರಾಯಗಳಾಗಿವೆ.

ಈ ರೀತಿಯಾಗಿ ಮುನ್ನುಡಿ ಬೆನ್ನುಡಿಗಳ ಅಧ್ಯಯನದ ಸಂದರ್ಭದಲ್ಲಿ ನನ್ನ ಗಮನಕ್ಕೆ ಬಂದ ಅಂಶಗಳೆಂದರೆ, ಈ ಎಲ್ಲಾ ಭಾಷಾಂತರ ಕುರಿತ ಚಿಂತನೆಗಳು ದೊರಕುವುದು ಖಾಸಗಿ ಪ್ರಕಾಶಕರು ಪ್ರಕಟಿಸಿದ ಕೃತಿಗಳಲ್ಲಿ ಮತ್ತು ಅವರ ಇತರ ಬರವಣಿಗೆಗಳಲ್ಲಿ ಮಾತ್ರ. ಬಹುತೇಕ ಭಾಷಾಂತರ ಕಾದಂಬರಿಗಳಲ್ಲಿ, ಪ್ರಬಂಧಗಳಲ್ಲಿ, ಹಾಸ್ಯ ಬರಹಗಳಲ್ಲಿ, ಸಂಕಲನಗಳಲ್ಲಿ, ಸಾಹಿತ್ಯೇತರ ಕೃತಿಗಳಲ್ಲಿ ಮುನ್ನುಡಿ, ಬೆನ್ನುಡಿಗಳೇ ಇರುವುದಿಲ್ಲ. ಎಲ್ಲೋ ಕೆಲವು ಕೃತಿಗಳಿದಿದ್ದರೂ ಅದರಲ್ಲಿ ಭಾಷಾಂತರ ಪ್ರಕ್ರಿಯೆ ಕುರಿತು ಏನನ್ನು ಹೇಳದೆ ಇರುವುದು ಆಶ್ಚರ್ಯದ ಸಂಗತಿಯಾಗಿದೆ. ಅಲ್ಲದೆ ಸಾಹಿತ್ಯ ಅಕಾಡೆಮಿ, ಕನ್ನಡ ಅಭಿವೃದ್ಧಿ ಪ್ರಾಧಿಕಾರ ಮುಂತಾದ ಅಕಾಡೆಮಿಕ್ ಪ್ರಕಟಣೆಯ ಭಾಷಾಂತರ ಕೃತಿಗಳಲ್ಲಿ ಭಾಷಾಂತರಕಾರರು ಭಾಷಾಂತರ ಪ್ರಕ್ರಿಯೆ ಕುರಿತು ಚಕಾರವನ್ನು ಎತ್ತದೇ ಇರುವುದು ಸೋಜಿಗದ ಸಂಗತಿಯಾಗಿದೆ.

ನಾನು ಈ ಅಧ್ಯಯನದಲ್ಲಿ ಯತೇಚ್ಛವಾಗಿ ಬಳಸಿಕೊಂಡಿರುವುದು ಸಾಹಿತ್ಯಿಕ ಭಾಷಾಂತರ ಕೃತಿಗಳನ್ನು, ಕಾರಣ ಕನ್ನಡದಲ್ಲಿ ಸಾಹಿತ್ಯಿಕ ಭಾಷಾಂತರ ಕೃತಿಗಳೇ ಹೆಚ್ಚಾಗಿ ಕಂಡುಬರುತ್ತಿದ್ದು, ಸಾಹಿತ್ಯೇತರ ಕೃತಿಗಳು ದೊರೆಯುವುದು ಅತ್ಯಲ್ಪ. ಅಲ್ಲದೆ ಕನ್ನಡದಲ್ಲಿ ಭಾಷಾಂತರ ಕುರಿತ ಚಿಂತನೆ ನಡೆಸಿರುವುದು ಸಾಹಿತ್ಯಿಕ ಭಾಷಾಂತರಕಾರರೇ ಹೆಚ್ಚು. ಜೊತೆಗೆ ಅಧ್ಯಯನದ ಮಿತಿ. ನನ್ನ ಅಧ್ಯಯನವನ್ನು ಸಾಹಿತ್ಯಿಕ ಕ್ಷೇತ್ರಕ್ಕೆ ಸೀಮಿತಗೊಳಿಸಿ ಕೊಂಡಿದ್ದೇನೆ. ಮುಂದಿನ ಅಧ್ಯಯನಗಳು ಭಾಷಾಂತರ ಕುರಿತ ಚಿಂತನೆಗಳನ್ನು ವಿಭಿನ್ನ ಕ್ಷೇತ್ರಗಳಲ್ಲಿ, ವಿಭಿನ್ನ ನೆಲೆಗಳಲ್ಲಿ ಕೈಗೊಳ್ಳುವ ಸಾಧ್ಯತೆಗಳಿವೆ. ವಿಜ್ಞಾನ, ತಂತ್ರಜ್ಞಾನ, ಮಾಧ್ಯಮ ಮುಂತಾದ ಕ್ಷೇತ್ರಗಳಲ್ಲಿ ಅಧ್ಯಯನವನ್ನು ಮುಂದುವರಿಸಬಹುದಾಗಿದೆ.

# ಆಕರಗಳು


೧. ಉಪಾಧ್ಯಾಯ ವಿ.ವಿ.(ಅನು), ೧೯೭೫, **ಕುರೂಪಿ ಗುಮಸ್ತ ಮತ್ತು ಇತರ ಕಥೆಗಳು**, ವಿ.ವಿ.ಉಪಾಧ್ಯಾಯ, ಎಡ್ವಕೇಟ್ ಕಾರ್ಕಳ, ದಕ್ಷಿಣ ಕನ್ನಡ

೨. ಕರೀಗೌಡ ಬೀಚನಹಳ್ಳಿ (ಸಂ), ೧೯೯೯, **ಭಾಷಾಂತರದ ಸಾಂಸ್ಕೃತಿಕ ನೆಲೆಗಳು**, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ

೩. ಕಲಬುರ್ಗಿ ಎಂ.ಎಂ.(ಸಂ), ೧೯೯೯, **ಹರಿಹರನ ರಗಳೆಗಳು**, ಪ್ರಸಾರಾಂಗ ಕನ್ನಡ ವಿಶ್ವವಿದ್ಯಾಲಯ, ಹಂಪಿ

೪. ಕುರ್ತಕೋಟಿ ಕೀರ್ತಿನಾಥ, ೧೯೯೮, **ನೂರುಮರ ನೂರುಸ್ವರ**, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ ಹಂಪಿ

೫. ಕುರ್ತಕೋಟಿ ಕೀರ್ತಿನಾಥ, ೧೯೯೨, **ಬಯಲು ಆಲಯ**, ಪ್ರಸಾರಾಂಗ ಕನ್ನಡ ವಿಶ್ವವಿದ್ಯಾಲಯ, ಹಂಪಿ

೬. ಕುಲಕರ್ಣಿ ರಂ.ರಾ.(ರಂಗಾರಾಮ), ನಿಡಗುಂದಿ (ಅನು), ೧೯೯೬, **ಬಾಳಲರಿಯನು ಬೀರುವು**, ಜೇಷ್ಠ ಪ್ರಕಾಶನ, ಕುಕನೂರು, ರಾಯಚೂರು

೭. ಕೃಷ್ಣಮೂರ್ತಿ ಕೆ.(ಅನು), ೧೯೭೪, **ಭಾರತೀಯ ಸಾಹಿತ್ಯ ಚರಿತ್ರೆ**, ಕನ್ನಡ ಪಠ್ಯಪುಸ್ತಕ ನಿರ್ದೇಶನಾಲಯ, ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ

೮. ಗುರುಮೂರ್ತಿ ಪೆಂಡಕೂರ (ಅನು), ೨೦೦೦, **ತೆಲಗು ಕಾವ್ಯಮಾಲೆ**, ಸಾಹಿತ್ಯ ಅಕಾಡೆಮಿ, ನವದೆಹಲಿ

೯. ಗೋವಿಂದರಾಜು ಎಂ., ಗೀತಾಚಾರ್ಯ ನಾ.(ಅನು), (೨೦೦೪) **ಕನ್ನಡ ತಿರುಕ್ಕುರಳ್**, ಬಿ.ಎಂ.ಶ್ರೀ, ಸ್ಮಾರಕ ಪ್ರತಿಷ್ಠಾನ, ಬೆಂಗಳೂರು

೧೦. ಜವರೇಗೌಡ ದೇವನಹಳ್ಳಿ (ಅನು), ೧೯೮೮, **ಲಿಯೋಟಾಲ್ ಸ್ಟಾಯ್ ಅವರ ಯುದ್ಧ ಮತ್ತು ಶಾಂತಿ**, ತೃತೀಯ ಸಂಪುಟ, ಕರ್ನಾಟಕ ರಾಷ್ಟ್ರೀಯ ವಯಸ್ಕರ ಶಿಕ್ಷಣ ಸಮಿತಿ, ಮೈಸೂರು

೧೧. ತಿಪ್ಪೆರುದ್ರಸ್ವಾಮಿ ಎಚ್ ., ೧೯೯೮, **ತೌಲನಿಕ ಕಾವ್ಯಮೀಮಾಂಸೆ**, ಡಿ.ವಿ.ಕೆ ಮೂರ್ತಿ, ಪ್ರಕಾಶಕರು, ಮೈಸೂರು

೧೨. ನಾಗಣ್ಣ ಸಿ.(ಅನು), ೧೯೯೯, ಮನ ಮೆಚ್ಚಿದ ಕಥೆಗಳು, ಅಭಿರುಚಿ ಪ್ರಕಾಶನ ಮೈಸೂರು

೧೩. ನಾಗಭೂಷಣ ಓ.ಎಲ್., ೧೯೯೩, ಭಾಷಾಂತರ, ಪ್ರಸಾರಾಂಗ ಕನ್ನಡ ವಿಶ್ವವಿದ್ಯಾಲಯ ಹಂಪಿ

೧೪. ನಾಗಭೂಷಣ ಓ.ಎಲ್., ೧೯೯೪, ವಿಮರ್ಶೆಯ ಪರಿಭಾಷೆ, ಅಂಕಿತ ಪುಸ್ತಕ, ಬೆಂಗಳೂರು

೧೫. ನಾವಡ ಎ.ವಿ.(ಸಂ), ೨೦೦೩, ಕನ್ನಡ ಅಧ್ಯಯನ ಮಳೆ ಸಂಚಿಕೆ, ಪ್ರಸಾರಾಂಗ ಕನ್ನಡ ವಿಶ್ವವಿದ್ಯಾಲಯ, ಹಂಪಿ

೧೬. ನಿಸ್ಸಾರ ಅಹಮ್ಮದ್ ಕೆ.ಎಸ್.(ಅನು), ೧೯೭೪ ಒಥೆಲೋ, ತಳುಕಿನ ವೆಂಕಣ್ಣಯ್ಯ ಸ್ಮಾರಕ ಗ್ರಂಥಮಾಲೆ, ಮೈಸೂರು

೧೭. ನಿಸ್ಸಾರ ಅಹಮ್ಮದ್ ಕೆ.ಎಸ್.(ಅನು), ೨೦೦೩, ಪಾಬ್ಲೊ ನೆರುಡ ಬರೀ ಮರ್ಯಾದಸ್ಥರೆ, ವಸಂತ ಪ್ರಕಾಶನ, ಬೆಂಗಳೂರು

೧೮. ಪಂಡಿತ ಸಿ.ಕೃಷ್ಣ, ೧೯೯೦, ಶಾಲೆಗಳಲ್ಲಿ ಕನ್ನಡ ಬೋಧನೆ, ಗೀತಾಬುಕ್‌ಹೌಸ್, ಮೈಸೂರು

೧೯. ಪಾರ್ವತಿ ಜಿ.ಐತಾಳ್ (ಅನು), ೨೦೦೦, ದುರ್ಬೀಜ, ಸುರಗಂಗಾ ಪಬ್ಲಿಕೇಷನ್ಸ್, ಕುಂದಾಪುರ

೨೦. ಪ್ರಧಾನ ಗುರುದತ್ತ (ಸಂ), ೨೦೦೪, ಅನಾವರಣ, ಕನ್ನಡ ಪುಸ್ತಕ ಪ್ರಾಧಿಕಾರ, ಬೆಂಗಳೂರು

೨೧. ಪ್ರಧಾನ ಗುರುದತ್ತ (ಸಂ), ೧೯೭೭, ನಾಗವಲ್ಲಿ, ಪ್ರಸಾರಾಂಗ ಮೈಸೂರು ವಿಶ್ವವಿದ್ಯಾಲಯ, ಮೈಸೂರು.

೨೨. ಪ್ರಧಾನ ಗುರುದತ್ತ, ೧೯೮೯, ಭಾಷಾಂತರ ಕಲೆ, ಬಿ.ಎಂ.ಶ್ರೀ ಸ್ಮಾರಕ ಪ್ರತಿಷ್ಠಾನ, ಬೆಂಗಳೂರು

೨೩. ಪ್ರಸಾದ್ ಬಿ.ಎಸ್., ೨೦೦೩, ಪ್ರಮುಖ ಭಾರತೀಯ ಭಾಷೆಗಳು, ಗಾಯತ್ರಿ ಎಂಟರ್ ಪ್ರೆಸಸ್, ಮೈಸೂರು

೨೪. ಭಟ್ ಎಸ್.ಆರ್., ೧೯೮೯, ಭಾಷಾಂತರ ಒಂದು ಕಲಾತ್ಮಕ ಅಭಿವ್ಯಕ್ತಿ, ನವಕರ್ನಾಟಕ ಪ್ರಕಾಶನ, ಬೆಂಗಳೂರು

೨೫. ಬ್ಯಾಳಿ ಕೆ.ಬಿ.(ಅನು), ೧೯೯೭, ಕನ್ನಡಕ್ಕೆ ರುಬಾಯಿಗಳು, ತಾಯಿ ಪ್ರಕಾಶನ, ಕುಕನೂರು

೨೬. ಮಲ್ಲಿಕಾರ್ಜುನ ಸ್ವಾಮಿ ಜಿ.ಎಂ.(ಅನು), ೨೦೦೦, ಇಂಗ್ಲೀಷ್ ಕವನಗಳು, ಜ್ಯೋತ್ಸ್ನಾ ಪ್ರಕಾಶನ, ಹರಿಹರ

೨೭. Mark shultle worth, 1999, **Dictionary of Translation studies,** Moiro courie.

೨೮. ಮಹಮ್ಮದ್ ಕುಳಾಯಿ (ಅನು), ೨೦೦೫, ರಂಗನೋ ಮಲೆ ಮುಂಗನೋ, ಲೋಹಿಯಾ ಪ್ರಕಾಶನ, ಬಳ್ಳಾರಿ

೨೯. ಮಾರ್ಕಂಡಪುರಂ ಶ್ರೀನಿವಾಸ (ಅನು), ೧೯೯೧, ಮಹಾಪ್ರಸ್ಥಾನ, ಕಾವ್ಯಮಂಜರಿ ಪ್ರಕಾಶನ, ಬೆಂಗಳೂರು

೩೦. ಮಿರ್ಜಿ ಡಿ.ಆರ್.(ಅನು), ೨೦೦೫, **ನಾರ್ಸಿಸಸ್ ಮತ್ತು ಗೋಲ್ಡಮಂಡ್**, ಐ.ಬಿ.ಎಚ್ .ಪ್ರಕಾಶನ, ಹರಿಹರ

೩೧. ಮೂರ್ತಿರಾವ್ ಎ.ಎನ್.(ಅನು), **ಹವಳದ ದ್ವೀಪ**, ಕಾವ್ಯಾಲಯ ಪ್ರಕಾಶನ, ಮೈಸೂರು

೩೨. ಮೊಳಕಲ್ಮೂರು ಶ್ರೀನಿವಾಸ ಮೂರ್ತಿ (ಅನು), ೧೯೯೨, **ಮುರಿದ ಹಕ್ಕಿಗಳು**, ಗುಣಶ್ರೀ ಪ್ರಕಾಶನ, ಬೆಂಗಳೂರು

೩೩. ಮೋಹನ್ ಕುಂಟಾರ್ (ಅನು), ೨೦೦೧, **ವಾಸುದೇವನ್ ನಾಯರ್ ಕಥೆಗಳು**, ಇಳಾ ಪ್ರಕಾಶನ, ಬೆಂಗಳೂರು

೩೪. ರಾಮಚಂದ್ರ ಶರ್ಮ ಬಿ.ಸಿ.(ಅನು), ೨೦೦೦, **ಈ ಶತಮಾನದ ನೂರು ಇಂಗ್ಲೀಷ್ ಕವನಗಳು**, ಜನಪ್ರಿಯ ಪುಸ್ತಕ ಮಾಲೆ, ಕನ್ನಡ ಪುಸ್ತಕ ಪ್ರಾಧಿಕಾರ, ಬೆಂಗಳೂರು

೩೫. ರಂಗಣ್ಣ ಎಸ್.ವಿ.(ಅನು), ೧೯೯೯, **ಈಸ್ಕಿಲಸ್ ನ ತನಿ ಎರೆಯುವವರು**, ಸಾಹಿತ್ಯ ಮಂದಿರ, ಬೆಂಗಳೂರು

೩೬. ಲಕ್ಷ್ಮೀ ನಾರಾಯಣ ಭಟ್ಟ (ಅನು), ೧೯೯೯, **ಚಿನ್ನದ ಹಕ್ಕಿ**, ಕ್ಷಮಾ ಪ್ರಕಾಶನ, ಬೆಂಗಳೂರು

೩೭. ಲಂಕೇಶ್ ಪಿ.(ಅನು), ೧೯೭೪, **ಸೋಪೋಕ್ಲಿಸ್ ಮಹಾಕವಿಯ ದೊರೆ ಈಡಿಪಸ್ ಮತ್ತು ಅಂತಿಗೋನೆ**, ನೆಲಮನೆ ಪ್ರಕಾಶನ, ಮೈಸೂರು

೩೮. ವೀಣಾಶಾಂತೇಶ್ವರ್ (ಅನು), ೨೦೦೧, **ಯಕೃತ್ತು**, ಸಾಹಿತ್ಯ ಅಕಾಡೆಮಿ, ನವದೆಹಲಿ

೩೯. ವೆಂಕಟೇಶ ತೀರಕೋ ಕುಲಕರ್ಣಿ(ಸಂ), ೧೯೯೯, **ಗಳಗನಾಥರ ಕಾದಂಬರಿ ಸಂಪುಟ ಎರಡು**, ಪ್ರಸಾರಾಂಗ ಕನ್ನಡ ವಿಶ್ವವಿದ್ಯಾಲಯ, ಹಂಪಿ

೪೦. ಶರಣಪ್ಪ ಜಿ.(ಅನು), ೨೦೦೪, **ಸ್ಪರ್ಶ (ಭಾಷಾಂತರದ ಕಥೆಗಳು)**, ಸ್ಪಂದನ ಪ್ರಕಾಶನ, ಚಿತ್ರದುರ್ಗ

೪೧. ಶಾನಭಾಗ ಡಿ.ಎನ್ .(ಅನು), ೧೯೮೩, **ಭಾರತೀಯ ಸಾಹಿತ್ಯ ಸಂಕಲನ**, ಪಠ್ಯಪುಸ್ತಕ ನಿರ್ದೇಶನಾಲಯ ಕನ್ನಡ ಅಧ್ಯಯನ ಪೀಠ, ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ.

೪೨. ಶಿವಕವಿ ಎನ್., ಶಿವನಗೌಡರ್(ಅನು), ೧೯೯೭, **ನಾಡಕವಿ ವೇಮಣ್ಣ**, ಪ್ರಕಾಶಕರು ಬಿ.ಅರ್.ಪಿ.ಗೌಡ, ಬೆಂಗಳೂರು

೪೩. ಶ್ರೀಕಂಠಯ್ಯ ಬಿ.ಎಂ.(ಅನು), ೧೯೯೦, **ಇಂಗ್ಲಿಷ್ ಗೀತೆಗಳು**, ಕಾವ್ಯಾಲಯ ಪ್ರಕಾಶಕರು, ಮೈಸೂರು

೪೪. ಶೇಷಗಿರಿರಾವ್ ಎಲ್.ಎಸ್.(ಸಂ), ೧೯೯೦, **ಭಾರತೀಯ ಸಾಹಿತ್ಯ ಸಮೀಕ್ಷೆ ಸಂಪುಟ ೧**, ಕರ್ನಾಟಕ ಸಾಹಿತ್ಯ ಅಕಾಡೆಮಿ, ಬೆಂಗಳೂರು

೪೫. ಶೇಷಾದ್ರಿ ಎಸ್.(ಅನು), ೧೯೯೫, **ಮಹಾವೈದ್ಯನಾಥ ಅಯ್ಯರ್**, ಪುರೋಗಾಮಿ ಪ್ರಕಾಶನ, ಬೆಂಗಳೂರು

೪೬. ಶಂಭಭಟ್ಟ (ಅನು), ೧೯೫೪, **ತುಲಸಿದಾಸರ ಶ್ರೀರಾಮಚರಿತ ಮಾನಸ ಪ್ರಥಮ ಸೋಪಾನ**, ವಡಿವಾಡಿ ಒಡೋದೆ

೪೭. ಸೀತಾರಾಮಯ್ಯ ವಿ.(ಅನು), ೧೯೮೬, **ಮೋಬಿಡಿಕ್**, ಪ್ರಸಾರಾಂಗ, ಬೆಂಗಳೂರು ವಿಶ್ವವಿದ್ಯಾಲಯ, ಬೆಂಗಳೂರು

೪೮. ಹೇರಂಜೆ ಕೃಷ್ಣಭಟರ್ (ಸಂ), ೧೯೯೫, **ಗೋವಿಂದ ಪೈ ಸಂಶೋಧನಾ ಸಂಪುಟ**, ರಾಷ್ಟ್ರಕವಿ ಗೋವಿಂದ ಪೈ ಸಂಶೋಧನ ಕೇಂದ್ರ, ಉಡುಪಿ

